KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೨ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೩, ೨೦೦೭ (ಭಾದ್ರಪದ ೨೨, ಶಕ ವರ್ಷ ೧೯೨೯) | ಸಂಚಿಕೆ ೩೭ |
|---|---|---|


## ಭಾಗ – ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಮಾಹಿತಿ ಪಡೆಯುವ ಹಕ್ಕು 2005 (ಸೆಂಟ್ರಲ್ ಆಕ್ಟ್ 22 ಆಫ್ 2005) ಸೆಕ್ಷನ್ 4 (1)ಬಿರಂತೆ**
**ಸಾರ್ವಜನಿಕರ ಮಾಹಿತಿಗಾಗಿ ಈ ಕೆಳಕಂಡಂತೆ ಪ್ರಕಟಿಸಿದೆ.**
**ತಿಪಟೂರು ಉಪ ವಿಭಾಗದಲ್ಲಿ ತಿಪಟೂರು/ತುರುವೇಕೆರೆ/ಚಿ.ನಾ.ಹಳ್ಳಿ/ತಾಲ್ಲೂಕುಗಳು ಬರುತ್ತವೆ.**

**1. 4(1) ಬಿ (i) ಕಛೇರಿಯ ವ್ಯವಸ್ಥೆ ಮತ್ತು ಕಾರ್ಯಗಳ ವಿವರ:-**
**ಲಗತ್ತಿಸಿರುವ ಅನುಬಂಧ-1ಎ ಮತ್ತು 1ಬಿ ರಂತೆ**

**2. 4(1) ಬಿ (ii) ಅಧಿಕಾರ ಮತ್ತು ಕರ್ತವ್ಯಗಳು:- ಲಗತ್ತಿಸಿರುವ ಅನುಬಂಧ-2 ರಂತೆ.**

**3. 4(1) ಬಿ (iii) ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆ ಮಾರ್ಗಸೂಚಿಗಳನ್ನೊಳಗೊಂಡಂತೆ ನಿರ್ಣಯ ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸುವ ಕಾರ್ಯವಿಧಾನ.**

1. ಉಪ ವಿಭಾಗಾಧಿಕಾರಿಗಳು ಪ್ರತ್ಯಾಯೋಜಿಸಿದ ಅಧಿಕಾರಿಯನ್ವಯ ಮೇಲ್ಕಂಡ ಕಾರ್ಯಗಳಡಿ ಅಂತಿಮ ನಿರ್ಣಯ ತೆಗೆದುಕೊಳ್ಳುವುದು.

**2. ವ್ಯವಸ್ಥಾಪಕರು:-** ವಿಷಯ ನಿರ್ವಾಹಕರು ಮಂಡಿಸಿದ ಪ್ರಸ್ತಾವನೆಯನ್ನು ಪರಿಶೀಲಿಸಿ ತೆಗೆದುಕೊಳ್ಳಬಹುದಾದ ಕ್ರಮಗಳ ಬಗ್ಗೆ ತಿಳಿಸಿ, ಉಪ ವಿಭಾಗಾಧಿಕಾರಿಗಳವರಿಗೆ ಕಡತ ಸಲ್ಲಿಸುವುದು.

3. ವಿಷಯ ನಿರ್ವಾಹಕರು ಕಛೇರಿ ಕಾರ್ಯವಿಧಾನ ಕೈಪಿಡಿಯಂತೆ ಅವರಿಗೆ ವಹಿಸಿದ ಶಾಖೆಗಳಿಗೆ ಸಂಬಂಧಪಟ್ಟ ಕಾನೂನು ಅವಕಾಶ ಪರಿಶೀಲಿಸಿ ಟಿಪ್ಪಣಿಯನ್ನು ವ್ಯವಸ್ಥಾಪಕರವರಿಗೆ ಮಂಡಿಸುವುದು.

**4(1) bIV ಪ್ರಕಾರ್ಯಗಳ ನಿರ್ವಹಣೆಗೆ ಅಳವಡಿಸಿಕೊಂಡಿರುವ ಸೂತ್ರಗಳು:-**

1. ಉಪ ವಿಭಾಗಾಧಿಕಾರಿಗಳವರ ಆದ್ಯತೆ ಮೇರೆ ಕಾರ್ಯಗಳನ್ನು ನಿರ್ವಹಿಸುವುದು.
2. ತಾಂತ್ರಿಕ ಸಹಾಯಕರು ಹಾಗೂ ಭೂ ದಾಖಲೆ ಸಹಾಯಕ ನಿರ್ದೇಶಕರು ಸೂಚಿಸಿರುವ ಪೋಡಿ ಶಾಖೆ ಮತ್ತು ಇತರೆ ಕೆಲಸಗಳ ನಿರ್ವಹಣೆ.
3. ವ್ಯವಸ್ಥಾಪಕರು ಕಛೇರಿ ಕಾರ್ಯ ವಿಧಾನದ ಕೈಪಿಡಿಯಂತೆ ಕಾರ್ಯಗಳನ್ನು ನಿರ್ವಹಿಸುವುದು.
4. ಪ್ರ ದ ಸ ಕಛೇರಿ ಕಾರ್ಯ ವಿಧಾನದ ಕೈಪಿಡಿಯಂತೆ ಕಾರ್ಯಗಳನ್ನು ನಿರ್ವಹಿಸುವುದು.
5. ದ್ವಿ ದ ಸ ಕಛೇರಿ ಕಾರ್ಯ ವಿಧಾನದ ಕೈಪಿಡಿಯಂತೆ ಕಾರ್ಯಗಳನ್ನು ನಿರ್ವಹಿಸುವುದು.
6. ಶೀಘ್ರಲಿಪಿಗಾರರು ಅರೆ ಸರ್ಕಾರಿ ಪತ್ರಗಳ ನಿರ್ವಹಣೆ, ನ್ಯಾಯಾಲಯದ ಆದೇಶ ಮತ್ತು ಹೆಚ್ಚುವರಿ ಬೆರಳಚ್ಚು ಕೆಲಸ ಇತ್ಯಾದಿ ಹಾಗೂ ಉಪ ವಿಭಾಗಾಧಿಕಾರಿಗಳವರ ಪ್ರವಾಸ ಕಾರ್ಯಕ್ರಮದಲ್ಲಿ ಭಾಗವಹಿಸುವುದು, ಸ್ಥಳ ತನಿಖೆ ಸಂದರ್ಭದಲ್ಲಿ ಭಾಗವಹಿಸುವುದು ಮತ್ತು ದಿನಚರಿ ಸಲ್ಲಿಸುವುದು.
7. ತಾಲ್ಲೂಕು ಸರ್ವೇಯರ್ ಆದ್ಯತೆ ಮೇರೆ ಅಳತೆ ಕಾರ್ಯ ನಿರ್ವಹಿಸುವುದು.
8. ಬೆರಳಚ್ಚುಗಾರರು, ಎಲ್ಲಾ ಶಾಖೆಯ ಕರಡು ಪ್ರತಿ ಮತ್ತು ನ್ಯಾಯಾಲಯದ ಆದೇಶಗಳನ್ನು ಬೆರಳಚ್ಚು ಮಾಡುವುದು.
9. ವಾಹನ ಚಾಲಕರು, ವಾಹನ ಚಾಲನೆ ಮಾಡುವುದು.

10. ದಫೇದಾರ್ ಅವರಿಗೆ ವಹಿಸಿದ ಕೆಲಸಗಳ ಬಗ್ಗೆ ಆಯಾ ದಿನದಂದೇ ಕೆಲಸ ನಿರ್ವಹಿಸುವುದು.

11. ಡಿ ಗ್ರೂಪ್ ನೌಕರರು ಅವರಿಗೆ ವಹಿಸಿದ ಕೆಲಸಗಳ ಬಗ್ಗೆ ಆಯಾ ದಿನದಂದೇ ಕೆಲಸ ನಿರ್ವಹಿಸುವುದು.

**4(1) b V ಇಲಾಖೆಯಲ್ಲಿನ ನೌಕರರು ಪ್ರಕಾರ್ಯಗಳ ನಿರ್ವಹಣೆಗೆ ಬಳಸುತ್ತಿರುವ ಇಲಾಖೆಯಲ್ಲಿರುವ ಅಧೀನದಲ್ಲಿರುವ ನಿಯಮಗಳು, ನಿಬಂಧನೆಗಳು, ಸೂಚನೆಗಳು, ಕೈಪಿಡಿಗಳು ಮತ್ತು ದಾಖಲೆಗಳು**

| | |
|---|---|
| 1. | ಕರ್ನಾಟಕ ಭೂ ಕಂದಾಯ ಅಧಿನಿಯಮ 1964 |
| 2. | ಕರ್ನಾಟಕ ಭೂ ಕಂದಾಯ ನಿಯಮಾವಳಿ 1966 |
| 3. | ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 |
| 4. | ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969 |
| 5. | ಕರ್ನಾಟಕ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳ (ಹಲವು ಜಮೀನುಗಳ ಪರಭಾರೆ ನಿಷೇಧ) ಅಧಿನಿಯಮ 1978, ನಿಯಮಾವಳಿ 1979 |
| 6. | ಭೂ ಸ್ವಾಧೀನ ಅಧಿನಿಯಮ 1894 |
| 7. | ಮತದಾರರ ನೊಂದಣಿ ನಿಯಮಾವಳಿ 1960 |
| 8. | ಕರ್ನಾಟಕ ಸಾರ್ವಜನಿಕ ಆವೆನ್ಸ್‌ಗಳು ಅಧಿಕೃತ ಅನುಭವದಾರರನ್ನು ಹೊರಹಾಕುವುದು 1974. |
| 9. | ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993. |
| 10. | ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958. |
| 11. | ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ 1957) |
| 12. | ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಡತೆ 1956 |
| 13. | ಸಿವಿಲ್ ಪ್ರಕ್ರಿಯೆ ಸಂಹಿತೆ 1908 |
| 14. | ಕರ್ನಾಟಕ ನೀರಾವರಿ ಅಧಿನಿಯಮ 1965 |
| 15. | ಕರ್ನಾಟಕ ನೀರಾವರಿ (ನೀರಿನ ಕರ ಆಕರಣ) 1965 |
| 16. | ದಂಡ ಪ್ರಕ್ರಿಯೆ ಸಂಹಿತೆ ಕೋಡ್ 1974 |
| 17. | ಕರ್ನಾಟಕ ಪೊಲೀಸ್ ಅಧಿನಿಯಮ 1963 |
| 18. | ಕಾಲಪರಿಮಿತಿ ಅಧಿನಿಯಮ 1963 |
| 19. | ಭಾರತ ಸಾಕ್ಷ್ಯ ಅಧಿನಿಯಮ 1972 |
| 20. | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳ (ದೌಜನ್ಯ) ಅಧಿನಿಯಮ 1989 |
| 21. | ಜೀತದಾಳು ಪದ್ಧತಿ ಅಧಿನಿಯಮ 1976 |
| 22. | ವಕ್ಫ ಅಧಿನಿಯಮ 1954 |
| 23. | ಅಪರಾಧಿಕ ಕಾನೂನು ಮತ್ತು ಕೈದಿಗಳನ್ನು ಗುರುತಿಸುವುದು (ಕರ್ನಾಟಕ ವ್ಯಾಪ್ತಿ ಮತ್ತು ತಿದ್ದುಪಡಿ) ಅಧಿನಿಯಮ 1975 |
| 24. | ಕರ್ನಾಟಕ ಆರ್ಥಿಕ ಸಂಹಿತೆ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 |
| 25. | (M C E) ಮ್ಯಾನ್ಯೂಯಲ್ ಕಂಟ್ಯಾಜನಲ್ ಆಫ್ ಎಕ್ಸ್‌ಪೆಂಡೀಚರ್. |
| 26. | ಕರ್ನಾಟಕ ಪುರಸಭೆ ಅಧಿನಿಯಮ 1964. |

**4(1) b VI ಇಲಾಖೆ ಹೊಂದಿರುವ ಅಥವಾ ಇಲಾಖೆಯ ಸ್ವಾಧೀನದಲ್ಲಿರುವ ದಸ್ತಾವೇಜುಗಳ ಪ್ರವರ್ಗಗಳ ಪಟ್ಟಿ:-**

ಅನುಬಂಧ-1ಬಿ ರಲ್ಲಿ ಹೇಳಿದ ಶಾಖೆಗಳ ವಿಷಯ ವಹಿ ಮತ್ತು ವಿಲೇವಾರಿ ಕಡತಗಳು

**ಪ್ರಗತಿ ತಃಖ್ತೆಗಳು:-** ಉಪ ವಿಭಾಗದ DCB, ಹಾಜರಾತಿ ವಹಿ, ಸಾಂದರ್ಭಿಕ ರಜೆ ವಹಿ, ವ್ಯವಹಾರಿಕ ಅಂಕಿ ಅಂಶಗಳು, ವೇತನ ಬಟವಾಡಿ ವಹಿ, ವೇತದ ಬಡ್ತಿ ವಹಿ, ನಗದು ಪುಸ್ತಕ ವಹಿ, ಪೀಠೋಪಕರಣಗಳ ವಹಿ, ಗ್ರಂಥಾಲಯದ ಅಭಿಲೇಖಾಲಯದ ಲೇಖನಾ ಸಾಮಗ್ರಿ ದಾಸ್ತಾನು ವಹಿ ಮತ್ತು ವಿತರಣೆ ವಹಿ

4(1) b VII ಕಾರ್ಯಮಿತಿಯನ್ನು ರೂಪಿಸಲು ಅಥವಾ ಅನುಷ್ಠಾನಗೊಳಿಸುವ ಬಗ್ಗೆ ಜನ

**ಪ್ರತಿನಿಧಿಗಳ ಜೊತೆ ಸಮಾಲೋಚಿಸಲು ಅಥವಾ ಪ್ರಾತಿನಿಧ್ಯಕ್ಕೆ ಇರುವ ವ್ಯವಸ್ಥೆಗಳ ವಿವರಗಳು:-**

ಇಲ್ಲಾ

**4(1) b VIII ಸಲಹೆಯನ್ನು ಪಡೆಯುವ ಸಂಬಂಧದಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚಿನ ವ್ಯಕ್ತಿಗಳು ಇರುವಂತೆ ರಚಿಸಿರುವ ಮಂಡಳಿಗಳು ಷರತ್ತುಗಳು, ಸಮಿತಿಗಳು ಮತ್ತು ಇತರೆ ಸಂಸ್ಥೆಗಳು ಮತ್ತು ಇವುಗಳು ನಡೆಸುವ ಸಭೆಗಳು ಸಾರ್ವಜನಿಕರಿಗೆ ಮುಕ್ತವೇ ಅಥವಾ ಅಂತಹ ಸಭೆಗಳ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುವುದೇ?**

ಭೂ ನ್ಯಾಯ ಮಂಡಳಿ ತಿಪಟೂರು/ಚಿ.ನಾ.ಹಳ್ಳಿ/ತುರುವೇಕೆರೆ

4(1) b VIII ರಲ್ಲಿ ತಿಳಿಸಿರುವ ಸಮಿತಿಗಳ ನಡವಳಿಯಗಳು ಸಾರ್ವಜನಿಕರಿಗೆ ಲಭ್ಯವಿರುತ್ತದೆ.

**4(1) b IX ಅಧಿಕಾರಿಗಳ ಮತ್ತು ನೌಕರರ ನಿರ್ದೇಶಿಕೆ (Directory):-**

| ಕ್ರ. ಸಂ. | ಹೆಸರು ಮತ್ತು ಪದನಾಮ |
|---|---|
| 01. | ಶ್ರೀ ಟಿ. ಮಲ್ಲಪ್ಪ, ಉಪ ವಿಭಾಗಾಧಿಕಾರಿಗಳು, ತಿಪಟೂರು ಉಪವಿಭಾಗ |
| 02. | ವೈ. ಜಯರಾಮಯ್ಯ,<br>ಭೂ ದಾಖಲೆಗಳ ಸಹಾಯಕ ನಿರ್ದೇಶಕರು ಹಾಗೂ ತಾಂತ್ರಿಕ ಸಹಾಯಕರು |
| 03. | ಎಂ.ಎಂ. ಹಡಪದ್, ವ್ಯವಸ್ಥಾಪಕರು |
| 04. | ಹೆಚ್.ಎಸ್. ಪರಮೇಶ, ಶೀಘ್ರಲಿಪಿಗಾರರು |
| 05. | ರಂಗಸ್ವಾಮಯ್ಯ, ಪ್ರ.ದ.ಸ. |
| 06. | ಗರುಡರಂಗಯ್ಯ, ದ್ವಿ.ದ.ಸ. (ನಿಯೋಜನೆ) |
| 07. | ಬಿ ಎನ್ ವೀರಭದ್ರಯ್ಯ, ದ್ವಿ.ದ.ಸ. |
| 08. | ಫಸೀವುನ್ನೀಸ್ಸಾ, ದ್ವಿ.ದ.ಸ. |
| 09. | ಎಲ್.ಎಸ್. ಶಿವಶಂಕರ, ಪ್ರ.ದ.ಸ. (ನಿಯೋಜನೆ) |
| 10. | ಟಿ.ಬಿ. ಮಂಗಳ ಗೌರಮ್ಮ ಮೀ. ಗ್ರಾ.ಲೆ. (ನಿಯೋಜನೆ) |
| 11. | ಬಿ.ಸಿ. ಸುಮತಿ, ಪ್ರದಸ |
| 12. | ಹೆಚ್.ಎಸ್. ನೀಲಕಂಠೇಶ್, ಬೆರಳಚ್ಚುಗಾರರು |
| 13. | ಸಿ.ಎಸ್. ಸುಚಿತ್ರ, ಬೆರಳಚ್ಚುಗಾರರು (ನಿಯೋಜನೆ) |
| 14. | ಕೆ. ರಾಜಣ್ಣ, ದ್ವಿ ದ ಸ |
| 15. | ಪಿ. ರಾಜಣ್ಣ, ವಾಹನ ಚಾಲಕರು |
| 16. | ಚಿಕ್ಕಹನುಮಂತಯ್ಯ, :ಡಿ:ಗ್ರೂಫ್ |
| 17. | ಕೆ.ಸಿ. ರವಿಕುಮಾರ್, :ಡಿ:ಗ್ರೂಫ್ |
| 18. | ಲಕ್ಷ್ಮಿದೇವಮ್ಮ :ಡಿ:ಗ್ರೂಫ್ (ನಿಯೋಜನೆ) |

**4(1) b X ಅಧಿಕಾರಿ/ನೌಕರರು ಹುದ್ದೆಯ ಹೆಸರು**

**ನಿವ್ವಳ ಸಂಬಳ**

**ಅನುಬಂಧ-3 ರಂತೆ**

**4(1) ಯೋಜನೆ ವಿವರಗಳು:ಪ್ರಸ್ತಾವಿಕ ವೆಚ್ಚಗಳು ಮತ್ತು ಬಟವಾಡೆ ಮಾಡಿದ ವರದಿಗಳನ್ನೊಳಗೊಂಡಂತೆ ಪ್ರತಿ ಏಜೆನ್ಸಿಗೂ ಹಂಚಿಕೆ ಮಾಡಿದ ಆಯವ್ಯಯ:-**

**ಶೀರ್ಷಿಕೆವಾರು ಅನುದಾನ ಬಿಡುಗಡೆಯಾದ ವಿವರ ಅನುಬಂಧ-4 ಲಗತ್ತಿಸಿದೆ**

**4(1)** b x II **ಹಣ ಹಂಚಿಕೆ ಮಾಡಿದ ವಿವರಗಳನ್ನೊಳಗೊಂಡಂತೆ ಕಾರ್ಯಕ್ರಮಗಳು ಫಲಾನುಭವಿಗಳ ವಿವರ ಹಾಗೂ ಸಹಾಯ ಧನ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ವಿಧಾನ:**

ರಾಷ್ಟ್ರೀಯ ಕುಟುಂಬ ಯೋಜನೆಯಡಿಯಲ್ಲಿ ಆರ್ಥಿಕ ಸೌಲಭ್ಯ ಕೋರಿದ ಪ್ರಕರಣಗಳ ಬಗ್ಗೆ ಜಿಲ್ಲಾಧಿಕಾರಿಗಳು ತುಮಕೂರು ರವರು ತಮ್ಮ ಅಧಿಕೃತ ಜ್ಞಾಪನ ಪತ್ರ ನಂ. ಎನ್‌ಎಸ್‌ಎಪಿ ಎನ್‌ಎಫ್‌ಬಿಎಸ್ ಸಿಆರ್-9/96-97 ದಿನಾಂಕ:20.6.2006ರ ರೀತ್ಯಾ ರೂ. 12,23,000-00 ಬಿಡುಗಡೆಯಾಗಿದ್ದು 122 ಫಲಾನುಭವಿಗಳಿಗೆ ರೂ. 12,20,000-00 ಪರಿಹಾರ ವಿತರಿಸಲಾಗಿದೆ.

**4(1) b X III ರಿಯಾಯಿತಿಗಳು, ಅಪ್ಪಣೆ ಪತ್ರಗಳು ಅಥವಾ ಅಧಿಕಾರ ಪತ್ರಗಳನ್ನು ಪಡೆದವರ ವಿವರಗಳು:-**

ಯಾವುದೇ ರಿಯಾಯಿತಿಗಳು, ಅಪ್ಪಣೆ ಪತ್ರ ಮಂಜೂರು ಮಾಡಿರುವುದಿಲ್ಲ.

4(1) b XIV ಉಪ ವಿಭಾಗದಲ್ಲಿ ದೊರೆಯುವ ಅಥವಾ ಹೊಂದಿರುವ ವಿದ್ಯುನ್ಮಾನ ರೂಪಕ್ಕೆ ಇಳಿಸಿರುವ ಮಾಹಿತಿಗಳು ವಿವರಗಳು:

----------ಇಲ್ಲ--------------

**4(1) b XV ಗ್ರಂಥಾಲಯವನ್ನು ಸಾರ್ವಜನಿಕರ ಬಳಕೆಗೆ ನಿರ್ವಹಿಸಿದ್ದಲ್ಲಿ, ಗ್ರಂಥಾಲಯವು ಅಥವಾ ವಾಚನಾಲಯವು ಕಾರ್ಯನಿರ್ವಹಿಸುವ ಸಮಯ ಹಾಗೂ ಸಾರ್ವಜನಿಕರಿಗೆ ಮಾಹಿತಿಯನ್ನು ಪಡೆಯಲು ಇರುವ ಅನುಕೂಲತೆಗಳ ವಿವರಗಳು:**

ಸಾರ್ವಜನಿಕರ ಬಳಕೆಗೆ ಗ್ರಂಥಾಲಯ ನಿರ್ವಹಿಸಿಲ್ಲ.

**4(1) b XVI ಸಾರ್ವಜನಿಕ ಸಂಪರ್ಕಾಧಿಕಾರಿಗಳ ಹೆಸರು, ಪದನಾಮ ಮತ್ತು ಇತರೆ ವಿವರಗಳು:-**

| ಕ್ರ. ಸಂ. | ಸಾರ್ವಜನಿಕ ಸಂಪರ್ಕಾಧಿಕಾರಿಗಳ ಹೆಸರು, ಪದನಾಮ | ದೂರವಾಣಿ ಸಂಖ್ಯೆ | |
|---|---|---|---|
| | | ಕಛೇರಿ | ನಿವಾಸ |
| 01 | ಶ್ರೀ ಟಿ. ಮಲ್ಲಪ್ಪ, ಉಪ ವಿಭಾಗಾಧಿಕಾರಿಗಳು ಮತ್ತು ಉಪವಿಭಾಗೀಯ ದಂಡಾಧಿಕಾರಿಗಳು, ತಿಪಟೂರು ಉಪವಿಭಾಗ, ತಿಪಟೂರು.<br>ಮೊಬೈಲ್ ನಂ. 94485 15363 | 08134 - 251085 | 08134 - 251106 |

## ಅನುಬಂಧ-1ಎ

## ಉಪ ವಿಭಾಗಾಧಿಕಾರಿಗಳ ಕಛೇರಿಯ ಸಂಘಟನೆಯ ವಿವರ:-

**ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2005 (ಸೆಂಟ್ರಲ್ ಆಕ್ಟ್ 22 2005) ಸೆಕ್ಷನ್ 4(1)ಬಿ ಪ್ರಕಾರ ಹಕ್ಕು ಕಾಯ್ದೆ ಅನ್ವಯದಂತೆ ತಿಪಟೂರು ಉಪ ವಿಭಾಗಾಧಿಕಾರಿಗಳ ಕಛೇರಿಗೆ ಒಳಪಟ್ಟಂತೆ ಮಾಹಿತಿಗಳ ಸಾರ್ವಜನಿಕ ಪ್ರಕಟಣೆ ವಿವರಗಳನ್ನು ಈ ಕೆಳಕಂಡಂತೆ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ:-**

| 1) ಅಧಿಕಾರಿ ಮತ್ತು ನೌಕರರ ಹೆಸರು ಮತ್ತು ಪದನಾಮ | ನಿರ್ವಹಿಸುತ್ತಿರುವ ವಿಷಯಗಳು |
|---|---|
| ಶ್ರೀ ಟಿ. ಮಲ್ಲಪ್ಪ,<br>ಉಪವಿಭಾಗಾಧಿಕಾರಿಗಳು ಹಾಗೂ ಉಪ ವಿಭಾಗದ ದಂಡಾಧಿಕಾರಿಗಳು, ಮತ್ತು ಸಾರ್ವಜನಿಕ ಮಾಹಿತಿ ಅಧಿಕಾರಿಗಳು, ತಿಪಟೂರು ಉಪವಿಭಾಗ, ತಿಪಟೂರು. | 1) ಉಪ ವಿಭಾಗದ ಸಾಮಾನ್ಯ ಆಡಳಿತ ನಿರ್ವಹಣೆ<br>2) ಕಾನೂನು ಸುವ್ಯವಸ್ಥೆ ಕಾಪಾಡುವುದು.<br>3) ಕಂದಾಯ ನ್ಯಾಯಾಲಯದ ಮೇಲ್ಮನವಿ ಪ್ರಕರಣಗಳ ವಿಲೇವಾರಿ<br>4) ಸಾರ್ವಜನಿಕ ಕುಂದುಕೊರತೆ ನಿವಾರಣೆ.<br>5) ಭೂ ಸ್ವಾಧೀನ ಪ್ರಕರಣಗಳ ನಡವಳಿಕೆ ನಡೆಸುವುದು.<br>6) PTCL ಪ್ರಕರಣಗಳ ವಿಲೇವಾರಿ.<br>7) ತಿಪಟೂರು ಉಪವಿಭಾಗದ ಭೂ ನ್ಯಾಯಮಂಡಳಿ ಅಧ್ಯಕ್ಷರಾಗಿ ಕಾರ್ಯನಿರ್ವಹಣೆ.<br>8) ಕಲಂ 77ಎ ರಡಿ ಸಲ್ಲಿಸಿದ 7ಎ ಅರ್ಜಿ ವಿಲೇವಾರಿ.<br>9) ಕರ್ನಾಟಕ ಮುನ್ಸಿಪಲ್ ಕಾಯ್ದೆ ಕಲಂ 306(1)ರಡಿ ಪ್ರಕರಣ ವಿಲೇವಾರಿ.<br>10) ಸಾರ್ವಜನಿಕ ಮಾಹಿತಿ ಅಧಿಕಾರಿ. |
| 2) ಶ್ರೀ ಎಂ.ಎಂ. ಹಡಪದ್,<br>ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಉಪ ವಿಭಾಗಾಧಿಕಾರಿಗಳ ಕಛೇರಿ, ತಿಪಟೂರು. | 1. ಕಛೇರಿಯ ಎಲ್ಲಾ ಶಾಖೆಗಳ ಮೇಲ್ವಿಚಾರಣೆ.<br>2. ಎ.ಜಿ. ಆಡಿಟ್ ಮತ್ತು ರೆವಿನ್ಯೂ ಆಡಿಟ್ ವರದಿಗಳ ಕಂಡಿಕೆಗಳಿಗೆ ಉತ್ತರ ಸಲ್ಲಿಸುವುದು.<br>3. ಮೇಲಾಧಿಕಾರಿಗಳಿಂದ ಬಂದ ಕಛೇರಿಗಳ ತಪಾಸಣೆಗಳಿಗೆ ಅನುಸರಣಾ ವರದಿ ಸಲ್ಲಿಕೆ.<br>4. ಅಧೀನ ಕಛೇರಿಗಳ ತಪಾಸಣೆಯಲ್ಲಿ ಸಹಕರಿಸುವುದು.<br>5. ಸಾರ್ವಜಿಕ ಸಹಾಯಕ ಮಾಹಿತಿ ಅಧಿಕಾರಿ. |

3) ಹೆಚ್.ಎಸ್. ಪರಮೇಶ್,
ಶೀಘ್ರಲಿಪಿಗಾರರು,
1. ಉಪ ವಿಭಾಗಾಧಿಕಾರಿಗಳ ಆಪ್ತ ಕಾರ್ಯ ನಿರ್ವಹಿಸುವುದು.
2. ಅರೆ ಸರ್ಕಾರಿ ಪತ್ರಗಳ ವಿಷಯ ನಿರ್ವಹಣೆ
3. ಸ್ಥಳ ತನಿಖೆ ಕಡತಗಳ ನಿರ್ವಹಣೆ
4. ಉಪ ವಿಭಾಗಾಧಿಕಾರಿಗಳ ದಿನಚರಿ ನಿರ್ವಹಿಸುವುದು.
5. ಉಪ ವಿಭಾಗಾಧಿಕಾರಿಗಳ ಪ್ರವಾಸ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವುದು.
6. ಈ ನ್ಯಾಯಾಲಯದ ಆದೇಶ ಮತ್ತು ಹೆಚ್ಚುವರಿ ಬೆರಳಚ್ಚು ಕೆಲಸ ಇತ್ಯಾದಿ.

4) ಪ್ರ.ದ.ಸ ಹುದ್ದೆ ಖಾಲಿ ಇದೆ.

5) ಶ್ರೀ ಪಿ. ರಂಗಸ್ವಾಮಿ
ಪ್ರಥಮ ದರ್ಜೆ ಸಹಾಯಕರು
1. ಭೂ ಸ್ವಾಧೀನ ಶಾಖೆ ವಿಷಯ ನಿರ್ವಹಣೆ
2. PTCL ಶಾಖೆ ವಿಷಯ ನಿರ್ವಹಣೆ
3. ಚುನಾವಣಾ ಶಾಖೆ ವಿಷಯ ನಿರ್ವಹಣೆ
4. ಆಶ್ರಯ (ಹಿಡುವಳಿ)
5. PPA ಶಾಖೆ ವಿಷಯ ನಿರ್ವಹಣೆ

6) ಶ್ರೀ ಎಲ್.ಎಸ್. ಶಿವಶಂಕರಯ್ಯ
ಪ್ರಥಮ ದರ್ಜೆ ಸಹಾಯಕರು
1. ಭೂ ಮಂಜೂರಾತಿ ನಡವಳಿಕೆ
2. ಭೂ ಸುಧಾರಣೆ ನಡವಳಿಕೆ
3. ಆಶ್ರಯ ಗೋಮಾಳ
4. ಸ್ಮಶಾನ ಜಮೀನು ಮಂಜೂರಾತಿ
5. ಪುರಸಭೆ ನಡವಳಿಕೆ
6. ಗ್ರಾಮ ಲೆಕ್ಕಿಗರ ಪ್ರವಾಸ ಸಮೀಕ್ಷೆ

7) ಶ್ರೀಮತಿ ಬಿ.ಸಿ. ಸುಮತಿ
ಪ್ರಥಮ ದರ್ಜೆ ಸಹಾಯಕರು
1. ಡಿಸಿಬಿ ಶಾಖೆ ವಿಷಯ ನಿರ್ವಹಣೆ
2. ಮುಜರಾಯಿ ಶಾಖೆ
3. MAG/ENT/PGC/ಜೀತ ಬಾಲಕಾರ್ಮಿಕ, ಆಹಾರ ಭದ್ರತೆ ಸ.ಕ.ಶಾಖೆ ವಿಷಯ ನಿರ್ವಹಣೆ

8) ಶ್ರೀ ಗರುಡರಂಗಯ್ಯ,
ದ್ವಿತೀಯ ದರ್ಜೆ ಸಹಾಯಕರು
1. ಆಡಳಿತ ಶಾಖೆ ವಿಷಯ ನಿರ್ವಹಣೆ
2. IND/HOA/FFP/ ::
3. FOR/Rmis/FOOD/ :: ಅ.ದಾ.ವಿವ/ಕೇಂ.ಮಾ.ಹ.ನಿ ಅಭಿಲೇಖಾಲಯ ಶಾಖೆ ವಿಷಯ ನಿರ್ವಹಣೆ

9) ಶ್ರೀ ಫಸೀಉನ್ನೀಸಾ,
ದ್ವಿತೀಯ ದರ್ಜೆ ಸಹಾಯಕರು
1. ಸಿಬ್ಬಂದಿ ಶಾಖೆ ವಿಷಯ ನಿರ್ವಹಣೆ
2. ಗ್ರಾ.ಲೆ. ಸಿಬ್ಬಂದಿ ಶಾಖೆ ::
3. ಎಸಿಟಿ ಶಾಖೆ ವಿಷಯ ನಿರ್ವಹಣೆ
4. ಎನ್‌ಎಫ್‌ಬಿಎಸ್ ::

10) ಶ್ರೀ ಬಿ.ಎನ್. ವೀರಭದ್ರಯ್ಯ
ದ್ವಿತೀಯ ದರ್ಜೆ ಸಹಾಯಕರು
1. RA ಅಪೀಲು ಪ್ರಕರಣಗಳ ವಿಷಯ ನಿರ್ವಹಣೆ
2. NCR CR ಶಾಖೆ ವಿಷಯ ನಿರ್ವಹಣೆ
3. ಆರ್‌ಆರ್‌ಟಿ ಶಾಖೆ ವಿಷಯ ನಿರ್ವಹಣೆ
4. ಸರ್ಕಾರಿ ಫಡಾ ಶಾಖೆ ವಿಷಯ ನಿರ್ವಹಣೆ

11) ಶ್ರೀ ಕೆ. ರಾಜಣ್ಣ
ದ್ವಿತೀಯ ದರ್ಜೆ ಸಹಾಯಕರು
1. ಆಮದು ಮತ್ತು ರವಾನೆ ಶಾಖೆ
2. ಟಿಎಜಿ ಶಾಖೆ ವಿಷಯ ನಿರ್ವಹಣೆ
3. ಎಸ್‌ಟಿಪಿ ಶಾಖೆ ವಿಷಯ ನಿರ್ವಹಣೆ
4. ಐಆರ್‌ಆರ್ ಶಾಖೆ ವಿಷಯ ನಿರ್ವಹಣೆ

12) ಟಿ.ಬಿ. ಮಂಗಳಗೌರಮ್ಮ
ಮೀಸಲು ಗ್ರಾಮಲೆಕ್ಕಿಗರು
(ನಿಯೋಜನೆ ಮೇರೆ)
1. ಸಿಎಎಲ್ (1)(2) ಶಾಖೆ ವಿಷಯ ನಿರ್ವಹಣೆ
2. ಎಂಪಿ/ಎಂಎಲ್‌ಎ ಗ್ರಾಂಟ್ಸ್
3. ಬರ ಪರಿಹಾರ ಕಾಮಗಾರಿಗಳು

13) ಹೆಚ್.ಎಸ್. ನೀಲಕಂಠೇಶ್

14) ಸಿ.ಎಸ್. ಸುಚಿತ್ರ
ಬೆರಳಚ್ಚುಗಾರರು
ಎಲ್ಲಾ ಶಾಖೆಗಳ ಬೆರಳಚ್ಚು ಕಾರ್ಯನಿರ್ವಹಣೆ ಮತ್ತು ನ್ಯಾಯಾಲಯ ಆದೇಶಗಳ ಬೆರಳಚ್ಚು ಕಾರ್ಯನಿರ್ವಹಣೆ

15) ಶ್ರೀ ವೈ. ಜಯರಾಮಯ್ಯ
ಭೂದಾಖಲೆಗಳ ಸಹಾಯಕ ನಿರ್ದೇಶಕರು ಹಾಗೂ ಪದನಿಮಿತ್ತ ತಾಂತ್ರಿಕ ಸಹಾಯಕರು
1. ಉಪವಿಭಾಗದ ಎಲ್ಲಾ ತರಹದ ಪೋಡಿ ಕಾರ್ಯದ ಪ್ರಗತಿ ನಿರ್ವಹಣೆ
2. ಉಪವಿಭಾಗಾಧಿಕಾರಿಗಳು ಸೂಚಿಸಿರುವ ಪೋಡಿ ಶಾಖೆ, ಇತರೆ ಕೆಲಸಗಳು

16) ದ್ವಿತೀಯ ದರ್ಜೆ ಭೂಮಾಪಕರ ಹುದ್ದೆ ಖಾಲಿ ಇದೆ.
1. ಪೋಡಿ ಶಾಖೆಯ ಪ್ರಗತಿ ನಿರ್ವಹಣೆ
2. ಉಪ ವಿಭಾಗಾಧಿಕಾರಿಗಳು ಹಾಗೂ ಭೂ ದಾಖಲೆಗಳ ತಾಂತ್ರಿಕ ಸಹಾಯಕ ಸೂಚಿಸುವ ಪೋಡಿ ಶಾಖೆಯ ಕೆಲಸಗಳು

17) ಶ್ರೀ ಚಿಕ್ಕ ಹನುಮಂತಯ್ಯ
ಡಿ ಗ್ರೂಪ್ ನೌಕರರು

18) ಶ್ರೀ ಕೆ.ಸಿ. ರವಿಕುಮಾರ್
ಡಿ ಗ್ರೂಪ್ ನೌಕರರು

19) ಲಕ್ಷ್ಮಿದೇವಮ್ಮ
ಡಿ ಗ್ರೂಪ ನೌಕರರು (ನಿಯೋಜನೆ ಮೇರೆ)

ಡಿ ಗ್ರೂಪ್ ನೌಕರರು ಅವರಿಗೆ ವಹಿಸಿದ ಬಗ್ಗೆ ಆಯಾ ದಿನದಂದೇ ಕೆಲಸ ನಿರ್ವಹಿಸುವುದು.
20) ದಫೇದಾರ್ ಹುದ್ದೆ ಖಾಲಿ ಇದೆ.

## ಅನುಬಂಧ-1 ಬಿ

## ಪ್ರಕಾರ್ಯಗಳು ಮತ್ತು ಕರ್ತವ್ಯಗಳು

**ಉಪ ವಿಭಾಗಾಧಿಕಾರಿಗಳು, ತಿಪಟೂರು ಉಪ ವಿಭಾಗದ ಮೇಲ್ವಿಚಾರಕರಾಗಿದ್ದು, ಇವರ ಅಧೀನದಲ್ಲಿ ಕೆಳಕಂಡ ಶಾಖೆಗಳು ಕಾರ್ಯನಿರ್ವಹಿಸುತ್ತವೆ.**

**ತಿಪಟೂರು ಉಪ ವಿಭಾಗಾಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶಾಖೆಗಳ ವಿವರಗಳು**

| ಕ್ರ. ಸಂ. | ಶಾಖೆಗಳು | |
|---|---|---|
| 1. | ಹಕ್ಕು ದಾಖಲೆ | ಜಮೀನಿನ ಖಾತೆ ಬದಲಾವಣೆ ಬಗ್ಗೆ ವ್ಯವಹರಿಸಲಾಗುತ್ತದೆ |
| 2. | ತಕರಾರು:ದಂಡ | ಅನಧಿಕೃತವಾಗಿ ಸರ್ಕಾರಿ ಜಮೀನು ಒತ್ತುವರಿ ಬಗ್ಗೆ ದಂಡನೆ ವಿಧಿಸುವ ಬಗ್ಗೆ. |
| 3. | ಭೂ ಪರಿವರ್ತನೆ | ಕೃಷಿಯೇತರ ಉಪಯೋಗಕ್ಕಾಗಿ ಭೂ ಪರಿವರ್ತನೆಗೆ ಅನುಮತಿಸುವ ಬಗ್ಗೆ ಪತ್ರವ್ಯವಹಾರ |
| 4. | RA PR | ಕ.ಭೂ.ಕಂದಾಯ ಅಧಿನಿಯಮ ಕಲಂ, 49, 136 (2) ರಡಿ ಬರುವ ಮೇಲ್ಮನವಿಗೆ ಸಂಬಂಧಿಸಿದಂತೆ ಮೇಲ್ಮನವಿ ವಿಚಾರಣೆಗೆ ನಿಗದಿಸುವ ಪೂರ್ವದಲ್ಲಿ ಪತ್ರ ವ್ಯವಹಾರ |
| 5. | ಗಣಕೀಕರಣ | RTC ಗಣಕೀಕರಣ ಮತ್ತು MR ಗಣಕ ಯಂತ್ರದ ಮೂಲಕ ಪತ್ರ ವ್ಯವಹಾರ |
| 6. | PTCL CR | ಪ.ಜಾತಿ.ಪ.ಪಂಗಡದವರಿಗೆ ಮಂಜೂರಾದ ಜಮೀನು ಪರಬಾರೆ ನಿಷೇಧ ನಿಬಂದನೆ ಉಲ್ಲಂಘಿಸಿ ಕ್ರಯವಾದ ಬಗ್ಗೆ ಕ್ರಮ ವಹಿಸುವುದು. |
| 7. | ಚುನಾವಣೆ | ಚುನಾವಣೆ ನಡೆಸುವ ಬಗ್ಗೆ |
| 8. | ಇನಾಂ ಶಾಖೆ | ಇನಾಂ ಜಮೀನುಗಳಿಗೆ ಸಂಬಂಧಿಸಿದಂತೆ ಪತ್ರ ವ್ಯವಹಾರ |
| 9. | ಜೀತ | ಜೀತ ಇರುವುದನ್ನು ಜೀತದಿಂದ ಬಿಡುಗಡೆಗೊಳಿಸುವ ಸಂಬಂಧ ಕ್ರಮ ವಹಿಸುವುದು. |
| 10. | ದಂಡನಾಶಾಖೆ | CRPC ಅಡಿ ಕ್ರಮ ಜರುಗಿಸುವ ಬಗ್ಗೆ |
| 11. | ENT | ಮನರಂಜನೆ ಕಾಯ್ದೆ ಅಡಿ ಕ್ರಮ. |
| 12. | ಭೂಸ್ವಾಧೀನ CR | ಸಾರ್ವಜನಿಕ ಉದ್ದೇಶಕ್ಕಾಗಿ ಹಿಡುವಳಿ ಜಮೀನು ಭೂಸ್ವಾಧೀನಪಡಿಸುವ ಬಗ್ಗೆ |

| ಕ್ರ. ಸಂ. | ಶಾಖೆಗಳು | |
|---|---|---|
| 13. | ಭೂಸ್ವಾಧೀನ SR | ಸಾರ್ವಜನಿಕ ಉದ್ದೇಶಕ್ಕಾಗಿ ಹಿಡುವಳಿ ಜಮೀನು ಭೂಸ್ವಾಧೀನಪಡಿಸುವ ಬಗ್ಗೆ |
| 14. | ಪರಿಹಾರ (LAC) | ಸಾರ್ವಜನಿಕ ಉದ್ದೇಶಕ್ಕಾಗಿ ಹಿಡುವಳಿ ಜಮೀನು ಭೂಸ್ವಾಧೀನಪಡಿಸುವ ಬಗ್ಗೆ |
| 15. | ಸಾ ಕುಂ ಕೊರತೆ | ಸಾರ್ವಜನಿಕ ಕುಂದು ಕೊರತೆ ನಿವಾರಣೆ ಬಗ್ಗೆ |
| 16. | ಆಶ್ರಯ | ಖಾಸಗಿ ಜಮೀನು ನಿವೇಶನ ವಿತರಣೆಗಾಗಿ ಖರೀದಿಸುವ ಬಗ್ಗೆ |
| 17. | ಪಿ ಪಿ ಎ | ಸಾರ್ವಜನಿಕರ ಸ್ವತ್ತು ಒತ್ತುವರಿ ತಡೆಯುವ ಬಗ್ಗೆ |
| 18. | ಬಾಲಕಾರ್ಮಿಕ | 14 ವರ್ಷದ ಒಳಗಿನ ಮಕ್ಕಳು ಕೂಲಿ ಮಾಡುವುದನ್ನು ತಡೆಗಟ್ಟುವ ಬಗ್ಗೆ |
| 19. | ನೀರಾವರಿ | ನೀರಾವರಿ ಸಲಹಾ ಸಮಿತಿ ನಡೆಸುವ ಬಗ್ಗೆ ನೀರಿನ ತೆರಿಗೆ, ನಿರ್ವಹಣಾ ತೆರಿಗೆ ವಸೂಲಿ ಬಗ್ಗೆ |
| 20. | STP | ಛಾಪಾ ಕಾಗದ ಮೌಲ್ಯ ಮರುಪಾವತಿ ಸಂಬಂಧ ಕ್ರಮ. |
| 21. | ವಿಫಲ ಬಾವಿ | ನೀರು ಬಾರದೆ ವಿಫಲವಾದ ಬಾವಿಗಳಿಗೆ ರಿಯಾಯಿತಿ ಮಂಜೂರಾತಿ ಬಗ್ಗೆ ಸ್ಥಳ ತನಿಖೆ ಮಾಡಿ ವರದಿ ಸಲ್ಲಿಸುವ ಬಗ್ಗೆ. |
| 22. | ಗ್ರಾ.ಪಂ.ಶಾಖೆ | ಗ್ರಾ.ಪಂ/ತಾ.ಪಂ/ಜಿ.ಪಂ. ವಿಷಯಗಳಿಗೆ ಪತ್ರ ವ್ಯವಹಾರ. |
| 23. | ಪ್ರ-ವಿಕೋಪ-1 | ಬೆಂಕಿ ಆಕಸ್ಮಿಕ ಪ್ರವಾಹ ಹಾನಿಗೊಳಗಾದವರಿಗೆ ಪರಿಹಾರ ನೀಡುವ ಬಗ್ಗೆ ಕ್ರಮ ವಹಿಸುವುದು. |
| 24. | ಪ್ರ-ವಿಕೋಪ-2 | ಬರ ಪರಿಹಾರ ಯೋಜನೆಯಡಿ ಉಂಟಾದ ಸಮಸ್ಯೆಗಳಿಗೆ ಕ್ರಮ ವಹಿಸುವುದು. |
| 25. | ಸಂ.ಸ.ಶಾ ಸ ನಿಧಿ | ವಿಧಾನ ಸಭಾ ಸದಸ್ಯರು/ ಸಂಸತ್ ಸದಸ್ಯರ ಅನುದಾನದಿಂದ ನಿರ್ಮಾಣ ಮಾಡುವ ಕಾಮಗಾರಿಗಳ ಪರಿಶೀಲನೆ ಮತ್ತು ವರದಿ ಸಲ್ಲಿಸುವ ಬಗ್ಗೆ. |
| 26. | ADM | ಸಾಮಾನ್ಯ ಆಡಳಿತ ವಿಷಯಕ್ಕೆ ಸಂಬಂಧಿಸಿದಂತೆ ಕ್ರಮವಹಿಸುವುದು. |
| 27. | ಗಣಿಗಾರಿಕೆ | ಗಣಿಗಾರಿಕೆ ಸಂಬಂಧ ಅನುಮತಿ ನೀಡುವ ಬಗ್ಗೆ ಸ್ಥಳ ತನಿಖೆ ಮಾಡಿ ಜಂಟಿ ವರದಿ ಸಲ್ಲಿಕೆ ಮತ್ತು ಅನಧಿಕೃತ ಗಣಿಗಾರಿಕೆ ತಡೆಗಟ್ಟುವ ಬಗ್ಗೆ ಕ್ರಮ ವಹಿಸುವುದು. |
| 28. | ಅನುವಂಶಿ | A B O A ಆಕ್ಟ್ ಅಡಿ ತೋಟಿ ತಲವಾರಿ ನೀರಗಂಟ ಮುಂತಾದ ಕೆಳದರ್ಜೆ ನೌಕರರ ಮತ್ತು ಮಾಜಿ ಪಟೇಲ್ ಶಾನುಬೋಗ್ ವಿಷಯಕ್ಕೆ ಸಂಬಂಧಿಸಿದಂತೆ ಪತ್ರ ವ್ಯವಹಾರ |
| 29. | ಕಂದಾಯ ಇತರೆ | ಕಂದಾಯ ಇಲಾಖೆ ಹೊರತುಪಡಿಸಿ ಇತರೆ ಇಲಾಖೆಗಳಿಗೆ ಸಂಬಂಧಿಸಿದ ವಿಷಯಗಳಿಗೆ ಪತ್ರ ವ್ಯವಹಾರ |
| 30. | ಆಹಾರ ಶಾಖೆ | ಪಡಿತರ ಚೀಟಿ ವಿತರಣೆ ಸಾರ್ವಜನಿಕರಿಗೆ ಆಹಾರ ವಿತರಣೆ ವಿಷಯಗಳ ಬಗ್ಗೆ ಕ್ರಮವಹಿಸುವುದು. |
| 31. | ಸ್ವಾ ಹೋ ಪಿ.ಶಾಖೆ | ಸ್ವಾತಂತ್ರ ಹೋರಾಟಗಾರರ ಪಿಂಚಣಿದಾರರ ಪತ್ರ ವ್ಯವಹಾರ |
| 32. | ಅರಣ್ಯ ಶಾಖೆ | ಅರಣ್ಯ ಇಲಾಖೆಗೆ ಸರ್ಕಾರಿ ಜಮೀನುಗಳಲ್ಲಿ ಮರಳಿ ಬೆಳೆಸಿದ ಬಗ್ಗೆ ಫಲ ಉಪಯೋಗಿಸಿಕೊಳ್ಳಲು ಸನ್ನದ್ದು ನೀಡುವಿಕೆ |
| 33. | ಪುರಸಭೆ | ಪುರಸಭೆ ಪಟ್ಟಣ ಪಂಚಾಯತಿ ಸಂಬಂಧಿಸಿದ ವಿಷಯಗಳಿಗೆ ಪತ್ರ ವ್ಯವಹಾರ |
| 34. | ದರಖಾಸ್ತು | ಸರ್ಕಾರಿ ಜಮೀನು ಮಂಜೂರಾತಿ ಬಗ್ಗೆ ಕ್ರಮವಹಿಸುವುದು |
| 35. | ಭೂಸುಧಾರಣೆ | ಭೂಸುಧಾರಣೆ ಕಾಯ್ದೆ ಅಡಿ ಭೂ ನ್ಯಾಯ ಮಂಡಳಿಗೆ ಸಂಬಂಧಿಸಿದಂತೆ 7ಎ ಅರ್ಜಿಗಳ ಬಗ್ಗೆ ಮತ್ತು ಕಲಂ 79 ಎ ಬಿ,80,83 ಅಡಿ ಕ್ರಮ |
| 36. | ಸಿಬ್ಬಂದಿ ಶಾಖೆ | ಸಿಬ್ಬಂದಿ ಸೇವಾ ವಿಷಯ ನಿರ್ವಹಣೆ ಬಗ್ಗೆ |
| 37. | ಗ್ರಾ. ಲೆ. ಶಾಖೆ | ಗ್ರಾಮಲೆಕ್ಕಿಗರ ಸೇವಾ ವಿಷಯ ನಿರ್ವಹಣೆ ಬಗ್ಗೆ |
| 38. | NFBS | ರಾಷ್ಟ್ರೀಯ ಕುಟುಂಬ ಯೋಜನೆ ಅಡಿ ಪರಿಹರ ಮಂಜೂರಾತಿ ಬಗ್ಗೆ |
| 39. | ಹಣಕಾಸು ಶಾಖೆ | D C ಬಿಲ್, T A ಬಿಲ್ ನಗದೀಕರಣ ಮೇಲು ರುಜು ಇತ್ಯಾದಿ ವಿಷಯಗಳ ಬಗ್ಗೆ ಮತ್ತು ವೈದ್ಯಕೀಯ ವೆಚ್ಚ ಮರು ಪಾವತಿ ವಿಷಯ ನಿರ್ವಹಣೆ. |
| 40. | ದೇವಾಲಯ ಶಾಖೆ | ಮುಜರಾಯಿ ದೇವಾಲಯಗಳಿಗೆ ಅಧಿಸೂಚಿತ ಸಂಸ್ಥೆಗಳ ಸಂಬಂಧ ವಿಷಯ ನಿರ್ವಹಣೆ |
| 41. | ಸರ್ಕಾರಿ ಬಾಕಿ | ಭೂಕಂದಾಯ, ನೀರಿನ ತೆರಿಗೆ ಮತ್ತು ನಿರ್ವಹಣಾ ತೆರಿಗೆ, ಬ್ಯಾಂಕ್ ಸಾಲ, ಮಿಸಲೇನಿಯಸ್ ರಿಕವರಿ ವಸೂಲಾತಿ ಬಗ್ಗೆ ಕ್ರಮ ವಹಿಸುವುದು. |
| 42. | ಸ.ಕ.ಶಾ | ಪ.ಜಾತಿ.ಪ.ಪಂಗಡದವರ ಕುಂದು ಕೊರತೆಗಳ ನಿವಾರಣೆ ಬಗ್ಗೆ |
| 43. | ಅಬಿಲೇಕಾಲಯ | ವಿಲೇವಾರಿಯಾದ ಕಡತಗಳ ನಿರ್ವಹಣೆ ಬಗ್ಗೆ |
| 44. | ಸಿ.ಎ.ಆರ್. | ನಕಲು ಕೋರಿ ಬಂದವರಿಗೆ ನಕಲು ನೀಡುವುದು |
| 45. | ಅಕ್ಷರ ದಾಸೋಹ | ಅಕ್ಷರ ದಾಸೋಹ ಯೋಜನೆ ಅಡಿ ಸಂಬಂಧಿಸಿದಂತೆ ಪತ್ರ ವ್ಯವಹಾರ |
| 46. | ಕಂದಾಯ ಅಪೀಲ್ | ಕ.ಭೂ.ಕಂದಾಯ ಅಧಿನಿಯಮ 1964 ಕಲಂ 49, 136(2)ರಡಿ ಬರುವ ಮೇಲ್ಮನವಿ ವಿಚಾರಣೆ. |
| 47. | PTCL SR | ಪ.ಜಾತಿ.ಪ.ಪಂಗಡದವರಿಗೆ ಮಂಜೂರಾದ ಜಮೀನು ಪರಭಾರೆ ನಿಷೇದ ಅವಧಿಯೊಳಗೆ ಮತ್ತು ಸರ್ಕಾರದ ಪೂರ್ವಾನುಮತಿ ಇಲ್ಲದೆ ಸಿ ಕ್ರಯವಾದ ಬಗ್ಗೆ ವಿಚಾರಣೆ |
| 48. | ಶಿಸ್ತು ಪ್ರಕರಣಗಳು | ಕರ್ನಾಟಕ ನಾಗರೀಕ ಸೇವಾ ನಿಯಂತ್ರಣ ವರ್ಗೀಕರಣ ಮತ್ತು ಮೇಲ್ಮನವಿ 1957 ರಡಿ ಶಿಸ್ತು ನಡವಳಿ ನಡೆಸುವುದು |
| 49. | ಪುರಸಭೆ ಅಪೀಲು | ಕರ್ನಾಟಕ ಪುರಸಭೆ ಅಧಿನಿಯಮ 1964 ಕಲಂ 306(1)ರಡಿ ಮೇಲ್ಮನವಿ ಬಗ್ಗೆ ವಿಚಾರಣೆ |

**ಅನುಬಂಧ-2**

**ಉಪ ವಿಭಾಗಾಧಿಕಾರಿಗಳು ತಿಪಟೂರು ಇವರ ಕಛೇರಿಯ ಅಧಿಕಾರಿ ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳು**

| ಕ್ರ. ಸಂ. | ಹುದ್ದೆಯ ಹೆಸರು | ಅಧಿಕಾರ ಮತ್ತು ಕರ್ತವ್ಯಗಳು |
|---|---|---|
| 01. | ಉಪ ವಿಭಾಗಾಧಿಕಾರಿಗಳು ಮತ್ತು ಉಪ ವಿಭಾಗೀಯ ದಂಡಾಧಿಕಾರಿಗಳು | 1. ಉಪ ವಿಭಾಗದ ಸಾಮಾನ್ಯ ಆಡಳಿತ ನಿರ್ವಹಣೆ<br>2. ಕಾನೂನು ಸುವ್ಯವಸ್ಥೆ ಕಾಪಾಡುವುದು<br>3. ಕಂದಾಯ ನ್ಯಾಯಾಲಯದ ಮೇಲ್ಮನವಿ ಪ್ರಕರಣಗಳ ವಿಲೇವಾರಿ<br>4. ಸಾರ್ವಜನಿಕ ಕುಂದುಕೊರತೆ ನಿವಾರಣೆ<br>5. ಭೂಸ್ವಾಧೀನ ಪ್ರಕರಣಗಳ ನಡವಳಿಕೆ ನಡೆಸುವುದು<br>6. PTCL ಪ್ರಕರಣಗಳ ವಿಲೇವಾರಿ<br>7. ತಿಪಟೂರು ಉಪವಿಭಾಗದ ಭೂ ನ್ಯಾಯಮಂಡಳಿ ಅಧ್ಯಕ್ಷರಾಗಿ ಕಾರ್ಯನಿರ್ವಹಣೆ<br>8. ಕಲಂ 77ಎ ರಡಿ ಸಲ್ಲಿಸ 7ಎ ಅರ್ಜಿ ವಿಲೇವಾರಿ<br>9. ಕರ್ನಾಟಕ ಮುನ್ಸಿಪಲ್ ಕಾಯ್ದೆ ಕಲಂ 306(1)ರಡಿ ಪ್ರಕರಣ ವಿಲೇವಾರಿ<br>10. ಸಾರ್ವಜನಿಕ ಮಾಹಿತಿ ಅಧಿಕಾರಿ |
| 02. | ಭೂ ದಾಖಲೆಗಳ ಸಹಾಯಕ ನಿರ್ದೇಶಕರು ಹಾಗೂ ತಾಂತ್ರಿಕ ಸಹಾಯಕರು | 1. ಉಪ ವಿಭಾಗದ ಎಲ್ಲಾ ತರಹದ ಪೋಡಿ ಕಾರ್ಯದ ಪ್ರಗತಿ ನಿರ್ವಹಣೆ.<br>2. ಉಪ ವಿಭಾಗಾಧಿಕಾರಿಗಳ ಸೂಚಿಸಿರುವ ಪೋಡಿ ಶಾಖೆ, ಇತರೆ ಕೆಲಸಗಳು. |
| 03. | ವ್ಯವಸ್ಥಾಪಕರು | 1. ಕಛೇರಿಯ ಎಲ್ಲಾ ಶಾಖೆಗಳ ಮೇಲ್ವಿಚಾರಣೆ<br>2. ಎ.ಜಿ. ಆಡಿಟ್ ಮತ್ತು ರೆವಿನ್ಯೂ ಆಡಿಟ್ ವರದಿಗಳ ಕಂಡಿಕೆಗಳಿಗೆ ಉತ್ತರ ಸಲ್ಲಿಸುವುದು<br>3. ಮೇಲಾಧಿಕಾರಿಗಳಿಂದ ಬಂದ ಕಛೇರಿಗಳ ತಪಾಸಣೆಗಳಿಗೆ ಅನುಸರಣಾ ವರದಿ ಸಲ್ಲಿಕೆ<br>4. ಅಧೀನ ಕಛೇರಿಗಳ ತಪಾಸಣೆಯಲ್ಲಿ ಸಹಕರಿಸುವುದು.<br>5. ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ, ಉಪ ವಿಭಾಗಾಧಿಕಾರಿಗಳ ಕಛೇರಿ, ತಿಪಟೂರು. |
| 04. | ಪ್ರಥಮ ದರ್ಜೆ ಸಹಾಯಕರು (ವಿಷಯ ನಿರ್ವಾಹಕರು) | ಅವರಿಗೆ ವಹಿಸಿದ ಶಾಖೆಗಳ ವಿಷಯ ನಿರ್ವಹಣೆ |
| 05. | ದ್ವಿತೀಯ ದರ್ಜೆ ಸಹಾಯಕರು (ವಿಷಯ ನಿರ್ವಾಹಕರು) | ಅವರಿಗೆ ವಹಿಸಿದ ಶಾಖೆಗಳ ವಿಷಯ ನಿರ್ವಹಣೆ |
| 06. | ಶೀಘ್ರಲಿಪಿಗಾರರು | 1. ಉಪ ವಿಭಾಗಾಧಿಕಾರಿಗಳ ಆಪ್ತ ಕಾರ್ಯ ನಿರ್ವಹಿಸುವುದು.<br>2. ಅರೆಸರ್ಕಾರಿ ಪತ್ರಗಳ ವಿಷಯ ನಿರ್ವಹಣೆ<br>3. ಸ್ಥಳ ತನಿಖೆ ಕಡತಗಳ ನಿರ್ವಹಣೆ<br>4. ಉಪ ವಿಭಾಗಾಧಿಕಾರಿಗಳ ದಿನಚರಿ ನಿರ್ವಹಿಸುವುದು<br>5. ಉಪವಿಭಾಗಾಧಿಕಾರಿಗಳ ಪ್ರವಾಸ ಕಾರ್ಯಕ್ರಮದಲ್ಲಿ ಪಾಲ್ಗೊಳುವುದು.<br>6. ಈ ನ್ಯಾಯಾಲಯದ ಆದೇಶ ಬೆರಳಚ್ಚು ಮತ್ತು ಹೆಚ್ಚುವರಿ ಬೆರಳಚ್ಚು ಕೆಲಸ ಇತ್ಯಾದಿ |
| 07. | ಬೆರಳಚ್ಚುಗಾರರು | ಎಲ್ಲಾ ಶಾಖೆಗಳ ಬೆರಳಚ್ಚು ಕಾರ್ಯ ಮತ್ತು ನ್ಯಾಯಾಲಯದ ಆದೇಶಗಳ ಬೆರಳಚ್ಚು ಕಾರ್ಯ |
| 08. | ಎ.ದ.ಭೂಮಾಪಕರು | 1. ಪೋಡಿ ಕಾರ್ಯದ ಪ್ರಗತಿ ನಿರ್ವಹಣೆ<br>2. ಉಪ ವಿಭಾಗಾಧಿಕಾರಿಗಳ ಹಾಗೂ ಭೂ ದಾಖಲೆಗಳ ತಾಂತ್ರಿಕ ಸಹಾಯಕರು ಸೂಚಿಸುವ ಪೋಡಿ ಶಾಖೆಯ ಕೆಲಸಗಳು |
| 09. | ದಫೇದಾರ್ | ಅವರಿಗೆ ವಹಿಸಿದ ಕಾರ್ಯಗಳನ್ನು ಆಯಾ ದಿನದಂದೇ ನಿರ್ವಹಿಸುವುದು. |
| 10. | ಡಿ ಗ್ರೂಪ್ | ಅವರಿಗೆ ವಹಿಸಿದ ಕಾರ್ಯಗಳನ್ನು ಆಯಾ ದಿನದಂದೇ ನಿರ್ವಹಿಸುವುದು. |

**ತಿಪಟೂರು ಉಪ ವಿಭಾಗಾಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರ ದೂರವಾಣಿ ಸಂಖ್ಯೆಗಳು**

**ತಿಪಟೂರು ಉಪವಿಭಾಗಾಧಿಕಾರಿಗಳ ಕಛೇರಿ ದೂರವಾಣಿ ನಂ. 08134-251085**

| ಕ್ರ. ಸಂ. | ಹೆಸರು ಮತ್ತು ಪದನಾಮ | ಮನೆ ನಂಬರು | ಮೊಬೈಲ್ ನಂಬರು |
|---|---|---|---|
| 01. | ಜಯರಾಮಯ್ಯ ADLR | 95816-2251297 | 94484 16698 |
| 02. | ಎಂ.ಎಂ. ಹಡಪದ್, ವ್ಯವಸ್ಥಾಪಕರು | 95816-2290016 | - |
| 03. | ಹೆಚ್.ಎಸ್. ಪರಮೇಶ, STENO | 951834-250236 | 94489 79544 |
| 04. | ರಂಗಸ್ವಾಮಯ್ಯ, ಪ್ರ.ದ.ಸ. | 95816-2206433 | |

| ಕ್ರ. ಸಂ. | ಹೆಸರು ಮತ್ತು ಪದನಾಮ | ಮನೆ ನಂಬರು | ಮೊಬೈಲ್ ನಂಬರು |
|---|---|---|---|
| 05. | ಗರುಡರಂಗಯ್ಯ, ದ್ವಿ.ದ.ಸ. | - | 98442 63899 |
| 06. | ವೀರಭದ್ರಯ್ಯ, ದ್ವಿ.ದ.ಸ. | - | 98800 41297 |
| 07. | ಫಸೀವುನ್ನೀಸ್ಸಾ | 958134-252324 | - |
| 08. | ಶಿವಶಂಕರ, ಪ್ರ.ದ.ಸ. | 958134-253357 | - |
| 09. | ಮಂಗಳ ಗೌರಮ್ಮ ಮೀ. ಗ್ರಾ.ಲೆ. | 958134-252735<br>254813 | - |
| 10. | ಸುಮತಿ, ಪ್ರದಸ | 958134-251837 | - |
| 11. | ನೀಲಕಂಠೇಶ್, ಬೆರಳಚ್ಚುಗಾರರು PP | 958134-252398 | - |
| 12. | ಕೆ. ರಾಜಣ್ಣ, ದ್ವಿ ದ ಸ PP | 95816-2260263 | - |
| 13. | ಪಿ. ರಾಜಣ್ಣ, ವಾಹನ ಚಾಲಕರು | - | 94497 98076 |
| 14. | ಚಿಕ್ಕಹನುಮಂತಯ್ಯ, :ಡಿ:ಗ್ರೂಫ್ | 958134-264932 | - |
| 15. | ರವಿಕುಮಾರ್, :ಡಿ:ಗ್ರೂಫ್ | 958132-222811 | 99864 09047 |
| 16. | ಲಕ್ಷ್ಮಿದೇವಮ್ಮ, :ಡಿ:ಗ್ರೂಫ್ | - | 99864 09017 |

**ಅನುಬಂಧ-3**

**ತಿಪಟೂರು ಉಪವಿಭಾಗಾಧಿಕಾರಿಗಳು, ಕಂದಾಯ ಇಲಾಖೆ, ತಿಪಟೂರು, ಇವರು ಮತ್ತು ನೌಕರರು ಪಡೆಯುತ್ತಿರುವ ಮಾಸಿಕ ವೇತನದ ವಿವರಗಳು:**

| ಕ್ರ. ಸಂ. | ಹೆಸರು ಮತ್ತು ಪದನಾಮ | ನಿವ್ವಳ ಸಂಬಳ ರೂ. |
|---|---|---|
| 01. | ಶ್ರೀ ಟಿ. ಮಲ್ಲಪ್ಪ, ಉಪ ವಿಭಾಗಾಧಿಕಾರಿಗಳು,<br>ತಿಪಟೂರು ಉಪವಿಭಾಗ | 19,087-00 |
| 02. | ಎಂ.ಎಂ. ಹಡಪದ್, ವ್ಯವಸ್ಥಾಪಕರು | 7359-00 |
| 03. | ಡಿ. ರಾಮಸ್ವಾಮಯ್ಯ, ಪ್ರ.ದ.ಸ. | 10,747-00 |
| 04. | ಬಿ.ಸಿ. ಸುಮತಿ, ಪ್ರ.ದ.ಸ. | 5,166-00 |
| 05. | ಫಸೀವುನ್ನೀಸ್ಸಾ, ದ್ವಿ.ದ.ಸ. | 5,127-00 |
| 06. | ಬಿ.ಎನ್. ವೀರಭದ್ರಯ್ಯ, ದ್ವಿ.ದ.ಸ. | 4,383-00 |
| 07. | ಕೆ. ರಾಜಣ್ಣ., ದ್ವಿ.ದ.ಸ. | 5,393-00 |
| 08. | ಹೆಚ್.ಎಸ್. ಪರಮೇಶ, STENO | 5,757-00 |
| 09. | ಹೆಚ್.ಎಸ್. ನೀಲಕಂಠೇಶ್, ಬೆರಳಚ್ಚುಗಾರರು | 6,211-00 |
| 10. | ಪಿ. ರಾಜಣ್ಣ, ವಾಹನ ಚಾಲಕರು | 5,362-00 |
| 11. | ಕೆ.ಸಿ. ರವಿಕುಮಾರ್, :ಡಿ:ಗ್ರೂಫ್ | 4,170-00 |
| 12. | ಚಿಕ್ಕಹನುಮಂತಯ್ಯ, :ಡಿ:ಗ್ರೂಫ್ | 4,539-00 |
| 13. | ಪ್ರ.ದ.ಸ. ಹುದ್ದೆ ಖಾಲಿ | - |
| 14. | ದಫೇದಾರ್ ಹುದ್ದೆ ಖಾಲಿ | - |
| | **ತಾಂತ್ರಿಕ ಸಿಬ್ಬಂದಿ** | |
| 15. | ವೈ. ಜಯರಾಮಯ್ಯ, ತಾಂತ್ರಿಕ ಸಹಾಯಕರು ADLR | 10,701-00 |
| 16. | ಎ.ದ.ಭೂ, ಹುದ್ದೆ ಖಾಲಿ | - |
| 17. | ಬಾಂದು ಜವಾನ ಹುದ್ದೆ ಖಾಲಿ | - |
| | **2015-ಚುನಾವಣಾ ಲೆಕ್ಕ ಶೀರ್ಷಿಕೆ** | |
| 18. | ಪಿ. ರಂಗಸ್ವಾಮಿ, ಪ್ರ.ದ.ಸ. | 8,054-00 |

**ಅನುಬಂಧ-4**

**2006-07ನೇ ಸಾಲಿಗೆ 2053---094-1-01 ಲೆಕ್ಕ ಶೀರ್ಷಿಕೆಯಡಿ ಬಿಡುಗಡೆಯಾಗಿರುವ ಅನುದಾನದ ವಿವರ:-**

| ಕ್ರ. ಸಂ. | 041<br>ಪ್ರಮಾಣ ವೆಚ್ಚಗಳು | 051<br>ಸಾಮಾನ್ಯ ವೆಚ್ಚಗಳು | 052<br>ದೂರವಾಣಿ ವೆಚ್ಚಗಳು | 071<br>ಕಟ್ಟಡ ವೆಚ್ಚಗಳು | 195<br>ಸಾರಿಗೆ ವೆಚ್ಚಗಳು |
|---|---|---|---|---|---|
| 01 | 6700-00 | 2000-00 | 17000-00 | 7000-00 | 40000-00 |
| 02 | 8300-00 | 6600-00 | 25000-00 | 6600-00 | 50000-00 |
| **ಒಟ್ಟು** | **15000-00** | **8600-00** | **42000-00** | **13600-00** | **90000-00** |

ಉಪ ವಿಭಾಗಾಧಿಕಾರಿಗಳು,
ತಿಪಟೂರು ಉಪ ವಿಭಾಗ.

ಪಿ.ಆರ್. 378

**ಅರಣ್ಯ ಪರಿಸರ ಮತ್ತು ಜೀವಿಪರಿಸ್ಥಿತಿ ಶಾಸ್ತ್ರಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಅಪಜೀ 132 ಎಫ್‌ಎಎಫ್ 06, ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2007.**

1963ನೇ ಇಸವಿಯ ಕರ್ನಾಟಕ ಅರಣ್ಯ ಕಾಯಿದೆ (1964ನೇ ಇಸವಿಯ ಕರ್ನಾಟಕ ಕಾಯಿದೆ 5ರ) 4ನೇ ಅಧಿನಿಯಮದಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ

1. ಚಿಕ್ಕಮಗಳೂರು ಜಿಲ್ಲೆ, ಮೂಡಿಗೆರೆ ತಾಲ್ಲೂಕು, ಕಳಸ ಹೋಬಳಿ, ತನೋಡಿ ಗ್ರಾಮದ ಇದಕ್ಕೆ ಲಗತ್ತಾಗಿರುವ ಅನುಸೂಚಿಯಲ್ಲಿ ವಿವರಿಸಲ್ಪಟ್ಟಿರುವ ಚಕ್ಕುಬಂದಿಯುಳ್ಳ ಪ್ರದೇಶವನ್ನು **"ಮೀಸಲು ಅರಣ್ಯ``** ವನ್ನಾಗಿ ರಚಿಸಲು ಉದ್ದೇಶಿಸಿರುವುದಾಗಿ ಪ್ರಕಟಿಸಲಾಗಿದೆ.
2. ಮೇಲ್ಕಂಡ ಅಧಿನಿಯಮದ 4ರ 1(ಸಿ) ಉಪನಿಯಮವನ್ನನುಸರಿಸಿ ಅಂತಹ ಎಲ್ಲೆಗಳ ಒಳಭಾಗದಲ್ಲಿ ಅಡಗಿರುವ ಜಮೀನಿನಲ್ಲಿ ಅಥವಾ ಅದರ ಮೇಲೆ ಅಥವಾ ಅಂತಹ ಜಮೀನಿನ ಯಾವುದಾದರೂ ಅರಣ್ಯ ಉತ್ಪತ್ತಿಗೆ ಹಕ್ಕನ್ನು ತರುವ ಅಥವಾ ಹಕ್ಕಿದೆಯೆಂದು ಹೇಳುವ ಯಾವುದೇ ವ್ಯಕ್ತಿಗೆ ಯಾವುದಾದರೂ ಹಕ್ಕುಗಳಿವೆಯೋ ಅವುಗಳ ಸ್ವಭಾವವೇನು? ಮತ್ತು ಅವು ಎಷ್ಟರ ಮಟ್ಟಿನವು ಎಂಬ ಅಂಶಗಳನ್ನು ವಿಚಾರಣೆ ಮಾಡಿ ನಿಶ್ಚಯಿಸಿ, ಅವುಗಳ ವಿಷಯದಲ್ಲಿ ಮೇಲ್ಕಂಡ ಅಧಿನಿಯಮದಲ್ಲಿ ಒಳಗೊಂಡಿರುವ ಎರಡನೇ ಆಧ್ಯಾಯದಲ್ಲಿ ವಿಧಿಸಿರುವಂತೆ ಕ್ರಮ ನಡೆಸುವುದಕ್ಕೆ ಅರಣ್ಯ ವ್ಯವಸ್ಥಾಪನಾಧಿಕಾರಿಗಳು, ಶಿವಮೊಗ್ಗ ಇವರನ್ನು ನೇಮಿಸಲಾಗಿದೆ.
3. ಕೊಪ್ಪ ಅರಣ್ಯ ವಿಭಾಗದ ಉಪ ಅರಣ್ಯ ಸಂಕ್ಷಣಾಧಿಕಾರಿಗಳು ಈ ವಿಚಾರಣೆಯಲ್ಲಿ ಅರಣ್ಯ ವ್ಯವಸ್ಥಾಪನಾಧಿಕಾರಿಗಳಿಗೆ ಸಂಪೂರ್ಣ ಸಹಕಾರ ನೀಡಲು ಸಹ ಆದೇಶಿಸಲಾಗಿದೆ.
4. 16ನೇ ನಿಯಮದ 1ನೇ ಉಪ ನಿಯಮದಲ್ಲಿ ಕಾಣಿಸಿರುವ ಅಧಿಕಾರವನ್ನು ಅನುಸರಿಸಿ, ಅರಣ್ಯ ಕರ್ನಾಟಕ ರೆವಿನ್ಯೂ ಅಪ್ಯೂಲೇಟ್ ಟ್ರಿಬ್ಯೂನಲ್‌ದನ್ವಯ ವ್ಯವಸ್ಥಾಪನಾಧಿಕಾರಿಗಳು, ಶಿವಮೊಗ್ಗರವರಿಗೆ ಸದರಿ ಅಧಿನಿಯಮದ ಕಲಂ–11, 12, 14 ಅಥವಾ 15ರ ಹುಕುಂಗಳ ಮೇಲೆ ಬರುವ ಆಪೀಲುಗಳನ್ನು ಪಡೆಯುವ ಅಧಿಕಾರವನ್ನು ಕೊಡಲಾಗಿದೆ.
5. 16ನೇ ಅಧಿನಿಯಮದ 2ನೇ ಉಪ ನಿಯಮದ ಮೇರೆಗೆ ಯಾವುದಾದರೂ ವ್ಯಕ್ತಿಗೆ ಯಾವುದಾದರೂ ಹಕ್ಕುಗಳಿದ್ದರೆ 15ನೇ ಅಧಿನಿಯಮದ ಮೇರೆಗೆ ಕೊಡುವ ಹುಕುಂಗಳ ಮೇಲೆ ಹುಕುಂ ಕೊಟ್ಟ ತಾರೀಖಿನಿಂದ ಮೂರು ತಿಂಗಳೊಳಗಾಗಿ ಜಿಲ್ಲಾ ನ್ಯಾಯಾಲಯಕ್ಕೆ ಆಪೀಲು ಸಲ್ಲಿಸಬಹುದು.

**ಅನುಸೂಚಿ**

1) ಜಿಲ್ಲೆ : ಚಿಕ್ಕಮಗಳೂರು
2) ತಾಲ್ಲೂಕು : ಮೂಡಿಗೆರೆ
3) ಹೋಬಳಿ : ಕಳಸ
4) ಗ್ರಾಮ : ತನೋಡಿ

| ಗ್ರಾಮ | ಸರ್ವೆ ನಂ. | ವಿಸ್ತೀರ್ಣ | |
|---|---|---|---|
| | | ಎ. ಗುಂ. | ಹೆಕ್ಟೇರುಗಳು |
| ತನೋಡಿ | 33p | 556-00 | 225-01 |
| | 35p | 34-12 | 13-84 |
| | 66p | 1-36 | 0-57 |
| | 85p | 14-16 | 5-83 |
| | 108p | 289-28 | 117-24 |
| | **ಒಟ್ಟು** | **896–12** | **362–49** |

**ಕ್ಷೇತ್ರದ ಹೆಸರು – ತನೋಡಿ**

**ಸೀಮಾ ವಿವರಣೆ**

**ಉತ್ತರ:–** ಈ ಬ್ಲಾಕಿನ ಸೀಮಾ ರೇಖೆಯು ತನೋಡಿ ಗ್ರಾಮದ ಸರ್ವೆ ನಂ. 92ರ ಉತ್ತರ ಹಾಗೂ ಸರ್ವೆ ನಂ. 91 ಪೂರ್ವದ ಎಲ್ಲೆ ಸೇರುವ ಬಾಂದಿನಿಂದ ಉತ್ತರಕ್ಕೆ 5.00 ಸರಪಳಿ ದೂರದ ಸ್ಥಾನ ಸಂಖ್ಯೆ 1 ರಿಂದ ಪ್ರಾರಂಭವಾಗಿ ಆಗ್ನೇಯಾಭಿಮುಖವಾಗಿ 5.15 ಸರಪಳಿ ಚಲಿಸಿ ಸರ್ವೆ ನಂ.91, 92ರ ಬಾಂದಿನಿಂದ ಈಶಾನ್ಯಕ್ಕೆ 5.00 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 2ನ್ನು ಸೇರಿ ಪೂರ್ವಾಭಿಮುಖವಾಗಿ 5.25 ಸರಪಳಿ ಚಲಿಸಿ ಸರ್ವೆ ನಂ. 92ರ ಪೂರ್ವದ ಗಡಿಯಿಂದ ಉತ್ತರಕ್ಕೆ 7.50 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 3ನ್ನೂ ನಂತರ ಸರ್ವೆ ನಂ. 92ರ ಪೂರ್ವದ ಗಡಿಯಿಂದ ಈಶಾನ್ಯಕ್ಕೆ 11.00 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 3 ರಿಂದ 5.25 ಸರಪಳಿ ದೂರ ಚಲಿಸಿ ಸ್ಥಾನ ಸಂಖ್ಯೆ 4ನ್ನು ಸೇರುತ್ತದೆ. ನಂತರ 3.80 ಸರಪಳಿ ದೂರಕ್ಕೆ ಸರ್ವೆ ನಂ. 92 ಪೂರ್ವದ ಗಡಿಯಿಂದ ಈಶಾನ್ಯಕ್ಕೆ 13.00 ಸರಪಳಿ ಅಂತರದಲ್ಲಿ ಸ್ಥಾನ ಸಂಖ್ಯೆ 5ನ್ನು ಸೇರಿ ಪುನಃ ಈಶಾನ್ಯಾಭಿಮುಖವಾಗಿ 7.65 ಸರಪಳಿ ಚಲಿಸಿ ದೇವಗೋಡು, ತನೋಡಿ ಗ್ರಾಮದ ಗಡಿಯಿಂದ ದಕ್ಷಿಣಕ್ಕೆ 8.50 ಸರಪಳಿ ದೂರದ ಸ್ಥಾನ ಸಂಖ್ಯೆ 6ನ್ನು ಸೇರಿ ನಂತರ ಉತ್ತರಾಭಿಮುಖವಾಗಿ 6.50 ಸರಪಳಿ ಚಲಿಸಿ ದೇವಗೋಡು ತನೋಡಿ ಗ್ರಾಮದ ಗಡಿಯಿಂದ ದಕ್ಷಿಣಕ್ಕೆ 3.00 ಸರಪಳಿಯ ದೂರದ ಸ್ಥಾನ ಸಂಖ್ಯೆ 7ನ್ನು ಸೇರಿ ಪುನಃ ಉತ್ತರಾಭಿಮುಖವಾಗಿ ದೇವಗೋಡು ತನೋಡಿ ಗ್ರಾಮದ ಗಡಿಯನ್ನು ಸ್ಥಾನ ಸಂಖ್ಯೆ 8ರಲ್ಲಿ ಸೇರುತ್ತದೆ.

**ಪೂರ್ವ :–** ಸೀಮಾ ರೇಖೆಯು ಸ್ಥಾನ ಸಂಖ್ಯೆ 8 ರಿಂದ ದೇವಗೋಡು ತನೋಡಿ ಗ್ರಾಮದ ಎಲ್ಲೆಯಲ್ಲಿ ಆಗ್ನೇಯಾಭಿಮುಖವಾಗಿ ಚಲಿಸಿ ಗಣಪತಿ ದೇವಸ್ಥಾನದ ಎದುರಿನ ಗಡಿಬಾಂದನ್ನು ಸೇರಿ ಪುನಃ ಗಡಿಯಲ್ಲೆ ಮುಂದುವರೆದು

ದೇವಗೋಡು,ತನೋಡಿ ಹಲಸೂರು ಗ್ರಾಮಗಳ ಮೂರು ಬಾಂದನ್ನು ಸೇರುತ್ತದೆ. ನಂತರ ಹಲಸೂರು, ತನೋಡಿ ಗ್ರಾಮಗಳ ಗಡಿಯಲ್ಲಿ ಮುಂದುವರೆದು ನ್ಯಾಮನಹಳ್ಳಿ ಕಿರುಅರಣ್ಯದ ಪಶ್ಚಿಮದ ಎಲ್ಲೆಯಲ್ಲಿ ಹಾದು ಹಲಸೂರು ಮೀಸಲು ಅರಣ್ಯದ ಎಲ್ಲೆಯನ್ನು ಸ್ಥಾನ ಸಂಖ್ಯೆ 11 ರಲ್ಲಿ ಸೇರುತ್ತದೆ.

**ದಕ್ಷಿಣ:–** ಸೀಮಾರೇಖೆಯು ಸದರಿ ಹಲಸೂರು ಮೀಸಲು ಅರಣ್ಯದ ಎಲ್ಲೆಯಲ್ಲಿ ಪಶ್ಚಿಮ ಹಾಗೂ ದಕ್ಷಿಣಾಭಿಮುಖವಾಗಿ ಚಲಿಸಿ, ಸರ್ವೆ ನಂ. 35, 36, 66ರ ಕೂಡು ಬಾಂದಿನಿಂದ ಈಶಾನ್ಯಕ್ಕೆ 4.00 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 39ನ್ನು ಸೇರಿ ನಂತರ ಸರ್ವೆ ನಂ. 35 ಹಾಗೂ 66 ರಲ್ಲಿ ವಾಯುವ್ಯಾಭಿಮುಖವಾಗಿ 11.80 ಸರಪಳಿ ಚಲಿಸಿ, ಸರ್ವೆ ನಂ. 23, 25, 35ರ ಬಾಂದಿನಿಂದ ದಕ್ಷಿಣಕ್ಕೆ 7.50 ಸರಪಳಿ ದೂರದಲ್ಲಿ ರಸ್ತೆಯನ್ನು ಹಾಗೂ ಸ್ಥಾನ ಸಂಖ್ಯೆ 40ನ್ನು ಸೇರುತ್ತದೆ.

**ಪಶ್ಚಿಮ :–** ಸೀಮಾ ರೇಖೆಯು ಸದರಿ ರಸ್ತೆಯ ಪಕ್ಕದಲ್ಲೇ ಸರ್ವೆ ನಂ. 66 ಮತ್ತು 35ರಲ್ಲಿ ಈಶಾನ್ಯ ಉತ್ತರ, ಪಶ್ಚಿಮ ಹಾಗೂ ಉತ್ತರಾಭಿಮುಖವಾಗಿ ಕ್ರಮವಾಗಿ 4, 8, 3.75 ಹಾಗೂ 9.00 ಸರಪಳಿಗಳ ಅಂತರದಲ್ಲಿ ಚಲಿಸಿ ಸರ್ವೆ ನಂ. 34ರ ಈಶಾನ್ಯ ಮೂಲೆಯಿಂದ ಆಗ್ನೇಯಕ್ಕೆ 5.00 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 44ನ್ನು ಸೇರಿ ಪುನಃ ಸರ್ವೆ ನಂ. 35ರಲ್ಲೆ ಈಶಾನ್ಯಾಭಿಮುಖವಾಗಿ 8.00 ಸರಪಳಿ ಚಲಿಸಿ ಸರ್ವೆ ನಂ. 35, 36, 33 ರ ಬಾಂದಿನಿಂದ ನೈರುತ್ಯಕ್ಕೆ 8.00 ಸರಪಳಿ ಅಂತರದಲ್ಲಿ ಸ್ಥಾನ ಸಂಖ್ಯೆ 45 ನ್ನು ಸೇರಿ ಪುನಃ ಸರ್ವೆ ನಂ. 35, 33 ರಲ್ಲೇ ಉತ್ತರಾಭಿಮುಖವಾಗಿ 6.50 ಸರಪಳಿ ಚಲಿಸಿ ಸರ್ವೆ ನಂ. 35, 36, 33ರ ಬಾಂದಿನಿಂದ ಪಶ್ಚಿಮಕ್ಕೆ 7.50 ಸರಪಳಿ ಅಂತರದ ಸ್ಥಾನ ಸಂಖ್ಯೆ 46ನ್ನು ಸೇರಿ ನಂತರ ಪಶ್ಚಿಮಾಭಿಮುಖವಾಗಿ 6.00 ಸರಪಳಿ ದೂರದಲ್ಲಿ ಸರ್ವೆ ನಂ. 34, 35, 33ರ ಕೂಡುಬಾಂದಿನಿಂದ ಈಶಾನ್ಯಕ್ಕೆ 6.00 ಸರಪಳಿ ಅಂತರದಲ್ಲಿ ಸ್ಥಾನ ಸಂಖ್ಯೆ 47ರ ರಸ್ತೆಯನ್ನು ಸೇರುತ್ತದೆ. ನಂತರ ಸದರಿ ರಸ್ತೆ ಪಕ್ಕದಲ್ಲಿ ವಿವಿಧ ಕೋನಗಳಲ್ಲಿ ಚಲಿಸಿ ಸರ್ವೆ ನಂ. 32ರ ಆಗ್ನೇಯ ಮೂಲೆಯಿಂದ ಆಗ್ನೇಯಕ್ಕೆ 5.00 ಸರಪಳಿ ಅಂತರದಲ್ಲಿ ಸ್ಥಾನ ಸಂಖ್ಯೆ 53 ರನ್ನು ಸೇರುತ್ತದೆ. ನಂತರ ಸರ್ವೆ ನಂ. 33 ರಲ್ಲೇ ಪೂರ್ವ, ಉತ್ತರ ಹಾಗೂ ಪಶ್ಚಿಮಾಭಿಮುಖವಾಗಿ ಕ್ರಮವಾಗಿ 6.30, 2.00, 7.00 ಸರಪಳಿಗಳನ್ನು ಕ್ರಮಿಸಿ ಪುನಃ ರಸ್ತೆಯ ಪಕ್ಕ ಸ್ಥಾನ ಸಂಖ್ಯೆ 56 ನ್ನು ಸೇರಿ ರಸ್ತೆಯ ಪಕ್ಕದಲ್ಲೆ ವಿವಿಧ ಕೋನಗಳಲ್ಲಿ ಅಂದಾಜು 1 ಕಿ. ಮೀ. ಚಲಿಸಿ ಸರ್ವೆ ನಂ. 3, 85, 33, 108 ರ ಕೂಡು ಬಾಂದಿನಿಂದ ಪೂರ್ವಕ್ಕೆ 12.00 ಸರಪಳಿ ಅಂತರದಲ್ಲಿ ಸ್ಥಾನ ಸಂಖ್ಯೆ 62ನ್ನು ಸೇರುತ್ತದೆ. ನಂತರ ಈ ಕೆಳಕಂಡ ಕೋನ ಹಾಗೂ ಅಳತೆಯಂತೆ ಸರ್ವೆ ನಂ. 33, 108, 85 ಹಾಗೂ 108ರಲ್ಲಿ ಚಲಿಸಿ, ಸರ್ವೆ ನಂ. 106ರ ನೈರುತ್ಯ ಮೂಲೆಯಲ್ಲಿ ಸ್ಥಾನ ಸಂಖ್ಯೆ 88ನ್ನು ಸೇರುತ್ತದೆ.

**ಪಶ್ಚಿಮದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುತ್ತದೆ.**

| ಸ್ಥಾನದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ (ಸರಪಳಿಗಳಲ್ಲಿ) |
|---|---|---|---|
| 62 | 63 | $291^0$ | 5-50 |
| 63 | 64 | $187^0$ | 4-75 |
| 64 | 65 | $300^0$ | 8-55 |
| 65 | 66 | $217^0$ | 6-55 |
| 66 | 67 | $212^0$ | 2-65 |
| 67 | 68 | $304^0$ | 3-60 |
| 68 | 69 | $317^0$ | 3-10 |
| 69 | 70 | $343^0$ | 6-50 |
| 70 | 71 | $359^0$ | 6-00 |
| 71 | 72 | $01^0$ | 1-65 |
| 72 | 73 | $273^0$ | 4-95 |
| 73 | 74 | $333^0$ | 5-90 |
| 74 | 75 | $313^0$ | 4-55 |
| 75 | 76 | $79^0$ | 1-15 |
| 76 | 77 | $19^0$ | 6-05 |
| 77 | 78 | $284^0$ | 3-30 |
| 78 | 79 | $285^0$ | 3-30 |
| 79 | 80 | $93^0$ | 6-80 |
| 80 | 81 | $106^0$ | 2-45 |
| 81 | 82 | $51^0$ | 6-80 |
| 82 | 83 | $82^0$ | 4-05 |
| 83 | 84 | $349^0$ | 3-85 |
| 84 | 85 | $53^0$ | 3-30 |
| 85 | 86 | $325^0$ | 6-15 |
| 86 | 87 | $63^0$ | 6-00 |
| 87 | 88 | $59^0$ | 6-50 |

ನಂತರ ಸೀಮಾ ರೇಖೆಯು ಆಗ್ನೇಯಾಭಿಮುಖವಾಗಿ ಸರ್ವೆ ನಂ. 106ರ ಪಶ್ಚಿಮದ ಎಲ್ಲೆಯಲ್ಲೆ ಹಾದು ಸರ್ವೆ ನಂ. 106ರ ದಕ್ಷಿಣದ ಮೂಲೆಯಲ್ಲಿ ಸ್ಥಾನ ಸಂಖ್ಯೆ 94ನ್ನು ಸೇರಿ ನಂತರ ಈ ಕೆಳಕಂಡ ವಿವಿಧ ಕೋನಗಳಲ್ಲಿ ಸರ್ವೆ ನಂ. 108, 33, 108ರಲ್ಲಿ ಚಲಿಸಿ ಸರ್ವೆ ನಂ. 105ರ ಈಶಾನ್ಯ ಮೂಲೆಯಲ್ಲಿ ಸ್ಥಾನ ಸಂಖ್ಯೆ 113ನ್ನು ಸೇರುತ್ತದೆ.

| ಸ್ಥಾನದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ (ಸರಪಳಿಗಳಲ್ಲಿ) |
|---|---|---|---|
| 94 | 95 | $129^0$ | 5-50 |
| 95 | 96 | $135^0$ | 2-50 |
| 96 | 97 | $119^0$ | 3-00 |
| 97 | 98 | $74^0$ | 4-55 |
| 98 | 99 | $50^0$ | 4-00 |
| 99 | 100 | $41^0$ | 1-75 |
| 100 | 101 | $38^0$ | 2-95 |
| 101 | 102 | $314^0$ | 10-00 |
| 102 | 103 | $17^0$ | 4-50 |
| 103 | 104 | $26^0$ | 6-00 |
| 104 | 105 | $328^0$ | 7-50 |
| 105 | 106 | $304^0$ | 5-50 |
| 106 | 107 | $277^0$ | 4-50 |
| 107 | 108 | $292^0$ | 4-75 |
| 108 | 109 | $294^0$ | 7-00 |
| 109 | 110 | $230^0$ | 6-50 |
| 110 | 111 | $201^0$ | 3-65 |
| 111 | 112 | $320^0$ | 7-65 |
| 112 | 113 | $292^0$ | 6-65 |

ನಂತರ ಸೀಮಾ ರೇಖೆಯು ಸರ್ವೆ ನಂ. 105ರ ಉತ್ತರದ ಎಲ್ಲೆಯಲ್ಲಿ ಪಶ್ಚಿಮ ಹಾಗೂ ನೈರುತ್ಯಾಭಿಮುಖವಾಗಿ ಚಲಿಸಿ ಸರ್ವೆ ನಂ. 105 ವಾಯುವ್ಯ ಮೂಲೆಯಿಂದ 3–50 ಸರಪಳಿ ಪೂರ್ವಕ್ಕೆ ಸ್ಥಾನ ಸಂಖ್ಯೆ 116ನ್ನು ಸೇರಿ ತದನಂತರ ಸರ್ವೆ ನಂ. 108ರಲ್ಲೆ ಉತ್ತರ ಹಾಗೂ ವಾಯುವ್ಯಾಭಿಮುಖವಾಗಿ ಈ ಕೆಳಕಂಡ ಕೋನ ಹಾಗೂ ಅಂತರಗಳಲ್ಲಿ ಚಲಿಸಿ ಸರ್ವೆ ನಂ. 93ರ ಪೂರ್ವದ ಎಲ್ಲೆಯನ್ನು ಸ್ಥಾನ ಸಂಖ್ಯೆ 121ರಲ್ಲಿ ಚಲಿಸಿ ಸರ್ವೆ ನಂ. 93ರ ಪೂರ್ವದ ಎಲ್ಲೆ ಹಾಗೂ ಸರ್ವೆ ನಂ. 108ರಲ್ಲಿ ಈ ಕೆಳಕಂಡ ವಿವಿಧ ಕೋನಗಳಲ್ಲಿ ಚಲಿಸಿ, ಸರ್ವೆ ನಂ. 93ರ ಪೂರ್ವದ ಎಲ್ಲೆಯನ್ನು ಸ್ಥಾನ ಸಂಖ್ಯೆ 121ರಲ್ಲಿ ಸೇರಿ ಸರ್ವೆ ನಂ. 93ರ ಪೂರ್ವದ ಎಲ್ಲೆ ಹಾಗೂ ಸರ್ವೆ ನಂ. 108ರಲ್ಲಿ ಈ ಕೆಳಕಂಡ ವಿವಿಧ ಕೋನ ಹಾಗೂ ಅಂತರ ಚಲಿಸಿ ಸರ್ವೆ ನಂ. 92ರ ಪೂರ್ವದ ಎಲ್ಲೆ 128ರಲ್ಲಿ ಸೇರಿ ಸರ್ವೆ ನಂ. 98ರ ಉತ್ತರದ ಗಡಿಯಲ್ಲಿ ಚಲಿಸಿ ಪ್ರಾರಂಭಿಕ ಸ್ಥಾನ ಸೇರುತ್ತದೆ.

| ಸ್ಥಾನದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ (ಸರಪಳಿಗಳಲ್ಲಿ) |
|---|---|---|---|
| 113 | 114 | $250^0$ | 2-50 |
| 114 | 115 | $260^0$ | 3-00 |
| 115 | 116 | $242^0$ | 2-25 |
| 116 | 117 | $003^0$ | 8-50 |
| 117 | 118 | $268^0$ | 12-10 |
| 118 | 119 | $260^0$ | 4-00 |
| 119 | 120 | $340^0$ | 4-50 |
| 120 | 121 | $80^0$ | 7-60 |
| 121 | 122 | $324^0$ | 4-55 |
| 122 | 123 | $272^0$ | 1-55 |
| 123 | 124 | $258^0$ | 7-40 |
| 124 | 125 | $324^0$ | 4-40 |

| ಸ್ಥಾನದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ (ಸರಪಳಿಗಳಲ್ಲಿ) |
|---|---|---|---|
| 125 | 126 | $48^0$ | 6-40 |
| 126 | 127 | $21^0$ | 5-10 |
| 127 | 128 | $83^0$ | 4-45 |
| 128 | 129 | $16^0$ | 2-55 |
| 129 | 130 | $289^0$ | 5-40 |
| 130 | 1 | $330^0$ | 7-45 |

**ಎನ್‌ಕ್ಲೋಸರ್:–** ತನೋಡಿ, ದೇವಗೋಡು ಗಡಿಯಲ್ಲಿರುವ ಗಣಪತಿ ದೇವಸ್ಥಾನದ ಪಕ್ಕದ ಗಡಿಬಾಂದಿನಿಂದ ಪಶ್ಚಿಮಕ್ಕೆ 7–50 ಸರಪಳಿ ದೂರದ ಸ್ಥಾನ ಸಂಖ್ಯೆ 3 ರಿಂದ ಪ್ರಾರಂಭವಾಗಿ ಸರ್ವೆ ನಂ. 108ರಲ್ಲೆ ಈ ಕೆಳಕಂಡ ವಿವಿಧ ಕೋನ ಹಾಗೂ ಅಂತರಗಳಲ್ಲಿ ಚಲಿಸಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

| ಸ್ಥಾನದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ (ಸರಪಳಿಗಳಲ್ಲಿ) |
|---|---|---|---|
| 3 | 4 | $260^0$ | 6-40 |
| 4 | 5 | $319^0$ | 9-20 |
| 5 | 1 | $13^0$ | 8-75 |
| 1 | 2 | $107^0$ | 6-10 |
| 2 | 3 | $152^0$ | 10-95 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿ.ಆರ್. 536

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಪರಿಸ್ಥಿತಿ ಶಾಸ್ತ್ರ ಇಲಾಖೆ

## ಜಿಲ್ಲಾ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ಹಾಸನ ಜಿಲ್ಲೆ, ಹಾಸನ

### ಅಧಿಸೂಚನೆ

**ಸಂಖ್ಯೆ: ಎಡಿಎಂ/04/06-07, ದಿನಾಂಕ: 24ನೇ ಮೇ 2007**

**ವಿಷಯ:** ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯಿದೆಯನ್ನು ಪರಿಣಾಮಕಾರಿಯಾಗಿ ಹಾಗೂ ಸಮರ್ಪಕವಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005 (ಕೇಂದ್ರದ ಅಧಿನಿಯಮ 22)ನ್ನು ಜಾರಿಗೆ ತರುವ ಕುರಿತು.

**I. ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:-**

ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯಿದೆಯನ್ನು ಪರಿಣಾಮಕಾರಿಯಾಗಿ ಮತ್ತು ಸಮರ್ಪಕವಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005ರ (ಕೇಂದ್ರದ ಅಧಿನಿಯಮ 22ರ 2005) ರನ್ವಯ ಸೆಕ್ಷನ್ 5(1), 5(2) ಹಾಗೂ 19(1) ರಲ್ಲಿನ ಸೂಚನೆಯಂತೆ ಮೀನುಗಾರಿಕೆ ಇಲಾಖೆ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಜಿಲ್ಲಾ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರ ಕಛೇರಿಯನ್ನು **"ಸಾರ್ವಜನಿಕ ಪ್ರಾಧಿಕಾರ"** ವೆಂದು ಹಾಗೂ ಸದರಿ ಕಛೇರಿಗೆ **"ಸಾರ್ವಜನಿಕ ಮಾಹಿತಿ ಅಧಿಕಾರಿ", "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ"** ಹಾಗೂ **"ಮೇಲ್ಮನವಿ ಪ್ರಾಧಿಕಾರಿ"** ನೇಮಕ ಮಾಡಿ ಒಂದು ಅಧಿಸೂಚನೆಯನ್ನು ಹೊರಡಿಸಲಾಗಿದೆ.

ಅ) ಜಿಲ್ಲಾ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ ಹಾಸನ ಇಲ್ಲಿ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರವರು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಹಾಸನ ಇವರ ಮೇಲ್ವಿಚಾರಣೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ ಇವರಿಗೆ ಸಹಾಯಕರಾಗಿ ಈ ಕೆಳಗಿನಂತೆ ಸಿಬ್ಬಂದಿ ವರ್ಗ ಕಾರ್ಯನಿರ್ವಹಿಸುತ್ತಿದೆ.

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು | ಷರಾ |
|---|---|---|---|---|---|
| 1. | ಕಛೇರಿ ಅಧೀಕ್ಷಕರು | 1 | 1 | - | - |
| 2. | ಪ್ರ.ದ.ಸ. | 1 | 1 | - | - |
| 3. | ದ್ವಿ.ದ.ಸ. | 2 | 2 | - | - |
| 4. | ಬೆರಳಚ್ಚುಗಾರರು | 1 | 1 | - | - |
| 5. | ವಾಹನ ಚಾಲಕರು | 1 | - | 1 | - |
| 6. | ಜವಾನ | 2 | 2 | - | - |
| | **ಒಟ್ಟು** | **8** | **7** | **1** | |

**ಅ) ಈ ಕಛೇರಿ ಅಧೀನದಲ್ಲಿ ಬರುವ ತಾಲ್ಲೂಕು ಮಟ್ಟದ ಮತ್ತು ಇತರೆ ಅಧೀನ ಕಛೇರಿಗಳು:-**

ಈ ಕಛೇರಿ ಅಧೀನದಲ್ಲಿ ತಾಲ್ಲೂಕು ಮಟ್ಟದಲ್ಲಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಇವರ ಕಛೇರಿ ಮತ್ತು ಅವರಿಗೆ ಹೊಂದಿಕೊಂಡಿರುವ ಮೀನುಮರಿ ಪಾಲನಾ ಕೇಂದ್ರಗಳು (ಹೊಳೆನರಸೀಪುರ ತಾಲ್ಲೂಕು ಹೊರತುಪಡಿಸಿ) ಮತ್ತು ಮೀನುಗಾರಿಗೆ ಸಹಾಯಕ ನಿರ್ದೇಶಕರು ಶ್ರೇಣಿ (2) ರವರ ಕಛೇರಿ ಗೊರೂರು ಕೆಲಸ ಮಾಡುತ್ತಿವೆ.

**ಅವುಗಳ ವಿವರ ಈ ಕೆಳಕಂಡಂತಿದೆ:-**

**1) ಹಾಸನ ತಾಲ್ಲೂಕು (ಕಾರ್ಯಕ್ಷೇತ್ರ ಹಾಸನ ಮತ್ತು ಆಲೂರು ತಾಲ್ಲೂಕುಗಳು)**

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು ಶ್ರೇಣಿ (2) | 1 | 1 | - | - |
| 2. | ಮೀನುಗಾರಿಕೆ ಕ್ಷೇತ್ರಪಾಲಕ | 4 | 4 | - | - |

ಇವರ ನಿಯಂತ್ರಣದಲ್ಲಿ ಒಂದು ಮೀನುಮರಿ ಪಾಲನಾ ಕೇಂದ್ರ ಹಾಗೂ ಹಾಸನದ ಮಹಾರಾಜ ಪಾರ್ಕಿನಲ್ಲಿರುವ ಸರ್ಕಾರಿ ಮತ್ಸ್ಯಾಲಯವನ್ನು ನಿರ್ವಹಿಸಲಾಗುತ್ತಿದೆ.

**2) ಚನ್ನರಾಯಪಟ್ಟಣ ತಾಲ್ಲೂಕು (ಕಾರ್ಯಕ್ಷೇತ್ರ ಚೆನ್ನರಾಯಪಟ್ಟಣ ತಾಲ್ಲೂಕು)**

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು ಶ್ರೇಣಿ (2) | 1 | 1 | - | - |
| 2. | ಮೀನುಗಾರಿಕೆ ಕ್ಷೇತ್ರಪಾಲಕ | 2 | 2 | - | - |

ಇವರ ನಿಯಂತ್ರಣದಲ್ಲಿ ಚನ್ನರಾಯಪಟ್ಟಣದಲ್ಲಿ ಮೀನುಮರಿ ಪಾಲನಾ ಕೇಂದ್ರವನ್ನು ನಿರ್ವಹಿಸಲಾಗುತ್ತಿದೆ.

**3) ಬೇಲೂರು ತಾಲ್ಲೂಕು (ಕಾರ್ಯಕ್ಷೇತ್ರ ಬೇಲೂರು ಮತ್ತು ಸಕಲೇಶಪುರ):-**

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು ಶ್ರೇಣಿ (2) | 1 | | 1 | - |
| 2. | ಮೀನುಗಾರಿಕೆ ಹಿರಿಯ ಮೇಲ್ವಿಚಾರಕ | 1 | 1 | - | ಸಕಲೇಶಪುರ ಮೀನುಮರಿ ಪಾಲನಾ ಕೇಂದ್ರದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. |
| 3. | ಮೀನುಗಾರಿಕೆ ಕ್ಷೇತ್ರಪಾಲಕ (ಬೇಲೂರು ತಾ.ಗೆ ಸಂಬಂಧಿಸಿದಂತೆ) | 3 | 1 | 2 | |
| 4. | ಮೀನುಗಾರಿಕೆ ಕ್ಷೇತ್ರಪಾಲಕ (ಸಕಲೇಶಪುರ ತಾಲ್ಲೂಕಿಗೆ ಸಂಬಂಧಿಸಿದಂತೆ) | 3 | 2 | 1 | ಸಕಲೇಶಪುರ ಮೀನುಮರಿ ಪಾಲನಾ ಕೇಂದ್ರದಲ್ಲಿ 2 ಮೀನುಗಾರಿಕೆ ಕ್ಷೇತ್ರ ಪಾಲಕ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. |

ಇವರ ನಿಯಂತ್ರಣದಲ್ಲಿ ಬೇಲೂರಿನಲ್ಲಿ ಮತ್ತು ಸಕಲೇಶಪುರ ತಲಾ ಒಂದರಂತೆ ಮೀನುಮರಿ ಪಾಲನಾ ಕೇಂದ್ರಗಳನ್ನು ನಿರ್ವಹಿಸಲಾಗುತ್ತಿದೆ.

**4) ಹೊಳೆನರಸೀಪುರ ತಾಲ್ಲೂಕು (ಕಾರ್ಯಕ್ಷೇತ್ರ ಹೊಳೆನರಸೀಪುರ ತಾಲ್ಲೂಕು)**

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು ಶ್ರೇಣಿ (2) | 1 | 1 | - | - |
| 2. | ಮೀನುಗಾರಿಕೆ ಕ್ಷೇತ್ರಪಾಲಕ | 2 | 1 | 1 | - |

**5) ಅರಸೀಕೆರೆ ತಾಲ್ಲೂಕು (ಕಾರ್ಯಕ್ಷೇತ್ರ ಅರಸೀಕೆರೆ ತಾಲ್ಲೂಕು)**

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು ಶ್ರೇಣಿ (2) | 1 | 1 | - | - |
| 2. | ಮೀನುಗಾರಿಕೆ ಕ್ಷೇತ್ರಪಾಲಕ | 2 | - | 2 | - |

**6) ಅರಕಲಗೂಡು ತಾಲ್ಲೂಕು (ಕಾರ್ಯಕ್ಷೇತ್ರ ಅರಕಲಗೂಡು ತಾಲ್ಲೂಕು):-**

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು ಶ್ರೇಣಿ (2) | 1 | - | 1 | - |
| 2. | ಮೀನುಗಾರಿಕೆ ಮೇಲ್ವಿಚಾರಕ | 1 | 1 | - | ರಾಮನಾಥಪುರ ಮೀನುಮರಿ ಪಾಲನಾ ಕೇಂದ್ರದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. |

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು | ಷರಾ |
|---|---|---|---|---|---|
| 3. | ಮೀನುಗಾರಿಕೆ ಕ್ಷೇತ್ರಪಾಲಕ | 5 | 2 | 3 | ಮೀನುಗಾರಿಕೆ ಕ್ಷೇತ್ರಪಾಲಕರು ರಾಮನಾಥಪುರ ಮೀನುಮರಿ ಪಾಲನಾ ಕೇಂದ್ರದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. |
| 4. | ಕಛೇರಿ ಜವಾನ | 1 | 1 | - | |

ಇವರ ನಿಯಂತ್ರಣದಲ್ಲಿ ರಾಮನಾಥಪುರದಲ್ಲಿ ಮೀನುಮರಿ ಪಾಲನಾ ಕೇಂದ್ರವನ್ನು ನಿರ್ವಹಿಸಲಾಗುತ್ತಿದೆ.

**7) ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-2) ಇವರ ಕಛೇರಿ, ಗೊರೂರು:-**

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು ಶ್ರೇಣಿ (2) | 1 | - | 1 | - |
| 2. | ಮೀನುಗಾರಿಕೆ ಕ್ಷೇತ್ರಪಾಲಕ | 4 | 2 | 2 | - |

ಇವರ ನಿಯಂತ್ರಣದಲ್ಲಿ ಮೀನುಮರಿ ಪಾಲನಾ ಕೇಂದ್ರ ನಿರ್ವಹಿಸಲಾಗುತ್ತಿದೆ. ಮೀನುಮರಿ ಪಾಲನೆ ಮತ್ತು ವಿತರಣೆ ಜೊತೆಗೆ ಹೇಮಾವತಿ ಜಲಾಶಯಕ್ಕೆ ಬಿತ್ತನೆ ಮೀನುಮರಿಗಳ ಬಿತ್ತನೆ ಕಾರ್ಯ ಮತ್ತು ಜಲಾಶಯದಲ್ಲಿ ಮೀನು ಶಿಖಾರಿಗೆ ಪರವಾನಗಿಯನ್ನು ನೀಡುವ ಕರ್ತವ್ಯವನ್ನು ಸಹ ನಿರ್ವಹಿಸುತ್ತಿದ್ದಾರೆ.

೩) ಜಿಲ್ಲೆಯಲ್ಲಿ ಮೀನುಗಾರಿಕೆಯ ಮತ್ತು ಮೀನು ಕೃಷಿಕರ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಜಿಲ್ಲಾ ಮಟ್ಟದ ಕಛೇರಿಯಲ್ಲಿ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರವರಿಗೆ ಕಛೇರಿ ಅಧೀಕ್ಷಕರು, ಪ್ರ.ದ.ಸ., ದ್ವಿ.ದ.ಸ. ಮತ್ತು ಇತರೆ ಸಿಬ್ಬಂದಿಯವರು ಸಹಾಯಕರಾಗಿರುತ್ತಾರೆ. ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಮೀನುಗಾರಿಕೆ ಸಹಾಯಕ ನಿರ್ದೇಶಕರು ಶ್ರೇಣಿ (2) ಇವರುಗಳಿಗೆ ಸಹಾಯಕರಾಗಿ ಮೀನುಗಾರಿಕೆ ಹಿರಿಯ ಮೇಲ್ವಿಚಾರಕ, ಮೀನುಗಾರಿಕೆ ಮೇಲ್ವಿಚಾರಕ ಮತ್ತು ಮೀನುಗಾರಿಕೆ ಕ್ಷೇತ್ರಪಾಲಕರು ಹಾಗೂ ಇತರೆ ಸಿಬ್ಬಂದಿ ವರ್ಗ ಕೆಲಸ ಮಾಡುತ್ತಿದೆ. ಈ ಕೆಳಕಂಡ ಯೋಜನೆಗಳನ್ನು ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಹಾಸ ಇವರ ಮಾರ್ಗದರ್ಶನದ ಮೇರೆಗೆ ತಾಲ್ಲೂಕು ಮಟ್ಟದ ಅಧಿಕಾರಿಗಳು ಅನುಷ್ಠಾನಗೊಳಿಸುತ್ತಾರೆ.

**1) ಮೀನುಮರಿ ಉತ್ಪಾದನೆ ಪಾಲನೆ ಮತ್ತು ವಿತರಣೆ:-**

ಜಿಲ್ಲೆಯಲ್ಲಿ ಒಳನಾಡು ಮೀನುಗಾರಿಕೆ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು, ಮೀನು ಕೃಷಿಕರಿಗೆ ಬಿತ್ತನೆಗೆ ಬೇಕಾದ ಉತ್ತಮ ತಳಿಯ ಮೀನುಮರಿಗಳನ್ನು ಸರ್ಕಾರ ನಿಗದಿ ಪಡಿಸಿರುವ ದರದಲ್ಲಿ ಈ ಕಾರ್ಯಕ್ರಮದಡಿ ಸರಬರಾಜು ಮಾಡಲಾಗುತ್ತಿದೆ. ಇದಕ್ಕಾಗಿ ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ (ಹೊಳೆನರಸೀಪುರ ಹೊರತುಪಡಿಸಿ) ಮತ್ತು ಗೊರೂರಿನಲ್ಲಿ ಒಂದು ಮೀನುಮರಿ ಪಾಲನಾ ಕೇಂದ್ರ ಒಳಗೊಂಡಂತೆ ಜಿಲ್ಲೆಯಲ್ಲಿ ಒಟ್ಟು ಏಳು ಕೇಂದ್ರಗಳನ್ನು ನಿರ್ಮಾಣ ಮಾಡಿ, ಈ ಕೇಂದ್ರಗಳಲ್ಲಿ ಅತಿ ಸಣ್ಣ ಮೀನುಮರಿಯನ್ನು ಸರ್ಕಾರಿ ಮೀನುಮರಿ ಉತ್ಪಾದನಾ ಕೇಂದ್ರಗಳಿಂದ ಆಮದು ಮಾಡಿಕೊಂಡು, ಅವುಗಳನ್ನು ಬಿತ್ತನೆ ಗಾತ್ರದವರೆಗಿನ ಪೋಷಣೆ ಮಾಡಿ ಮೀನು ಕೃಷಿಕರಿಗೆ ಈ ಕೆಳಕಂಡಂತೆ ವಿವಿಧ ಜಾತಿಯ ಮೀನುಮರಿಗಳನ್ನು ಅವುಗಳ ಹೆಸರಿನ ಮುಂದೆ ಹೇಳಲಾದ ದರದಲ್ಲಿ ಸರಬರಾಜು ಮಾಡಲಾಗುತ್ತದೆ.

| ಕ್ರ. ಸಂ. | ಮೀನಿನ ಹೆಸರು | ಒಂದು ಸಾವಿರಕ್ಕೆ ನಿಗದಿಪಡಿಸಲಾದ ದರ | ಪ್ಯಾಕಿಂಗ್ ಚಾರ್ಜ್ (ಒಂದು ಪ್ಯಾಕೆಟ್‌ಗೆ) |
|---|---|---|---|
| 1. | ಕಾಟ್ಲಾ | ರೂ.<br>258/- | ರೂ.<br>4/- |
| 2. | ರೋಹು | 240/- | 4/- |
| 3. | ಮೃಗಾಲ್ | 210/- | 4/- |
| 4. | ಹುಲ್ಲುಗೆಂಡೆ | 400/- | 4/- |
| 5. | ಸಾಮಾನ್ಯಗೆಂಡೆ | 200/- | 4/- |

**2) ಬಾವಿ ಮತ್ತು ಹೊಂಡಗಳಲ್ಲಿ ಮೀನುಗಾರಿಕೆ ಅಭಿವೃದ್ಧಿಗಾಗಿ ಸಹಾಯ:-**

ಈ ಯೋಜನೆಯಡಿ ಸಣ್ಣ ಮತ್ತು ಅತಿ ಸಣ್ಣ ಕೃಷಿಕರಿಗೆ ಅವರ ಸ್ವಂತ ಬಾವಿ ಮತ್ತು ಕೃಷಿ ಹೊಂಡಗಳಲ್ಲಿ ಮೀನು ಕೃಷಿಯನ್ನು ತೆಗೆದುಕೊಳ್ಳಲು 1 ಗುಂಟೆ ಜಲಾವೃತ್ತ ಪ್ರದೇಶಕ್ಕೆ 1.00 ಬಿತ್ತನೆ ಮರಿಯಂತೆ ಗರಿಷ್ಟ 10 ಗುಂಟೆ ಜಲಾವೃತ್ತ ಪ್ರದೇಶದವರೆವಿಗೆ ಶೇ.100 ರ ಸಹಾಯಧನ ರೂಪದಲ್ಲಿ ಪೂರೈಸಲಾಗುವುದು.

**3) ಸಿಹಿ ನೀರು ಮೀನುಗಳಿಗಾಗಿ ಸಹಾಯಧನ:-**

ಈ ಯೋಜನೆಯಡಿ ಈಗಾಗಲೇ ಮೀನು ಕೃಷಿ ಕೊಳವನ್ನು ಹೊಂದಿರುವಂತಹ ಮೀನು ಕೃಷಿಕರಿಗೆ 1 ಎಕರೆ ಅಥವಾ ಅರ್ಧ ಎಕರೆ ಜಲಾವೃತ್ತ ಪ್ರದೇಶದಲ್ಲಿ ಸಿಹಿ ನೀರು ಸೀಗಡಿ ಕೃಷಿಯನ್ನು ಕೈಗೊಳ್ಳಲು ಅಂತಹ ಕೃಷಿಕರಿಗೆ ಪ್ರತಿ ಎಕರೆಗೆ ಘಟಕ ವೆಚ್ಚ ರೂ.0.40 ಲಕ್ಷದಲ್ಲಿ ಶೇ.50 ರಷ್ಟನ್ನು ಸಹಾಯಧನ ರೂಪದಲ್ಲಿ ಗರಿಷ್ಟ ರೂ.0.20 ಲಕ್ಷಗಳಿಗೆ ಮೀರದಂತೆ ಉತ್ತಮ ತಳಿಯ ಸಿಹಿನೀರು ಸೀಗಡಿ ಮತ್ತು ಸೀಗಡಿ ಆಹಾರವನ್ನು ಸರಬರಾಜು ಮಡಲಾಗುವುದು. ಅರ್ಧ ಎಕರೆ ಪ್ರದೇಶಕ್ಕೆ ಅನುಗುಣವಾಗಿ ಘಟಕ ವೆಚ್ಚದ ಅರ್ಧದಷ್ಟು ಅಂದರೆ ಗರಿಷ್ಟ ರೂ.0.10 ಲಕ್ಷಗಳಿಗೆ ಮೀರದಂತೆ ಉತ್ತಮ ತಳಿಯ ಸೀಗಡಿ ಮರಿ ಮತ್ತು ಸೀಗಡಿ ಆಹಾರವನ್ನು ಸರಬರಾಜು ಮಾಡಲಾಗುವುದು.

**4) ಮೀನು ಕೃಷಿ ಕೊಳ ನಿರ್ಮಾಣಕ್ಕಾಗಿ ಸಹಾಯಧನ:-**

ಈ ಯೋಜನೆಯಡಿ ಖಾಸಗಿ ಕೃಷಿಕರು ಹೊಸದಾಗಿ ಮೀನು ಕೃಷಿ ಕೈಗೊಳ್ಳಲು ಮುಂದೆ ಬಂದು, ಅವರ ಜಮೀನಿನಲ್ಲಿ ಒಂದು ಎಕರೆ ವಿಸ್ತೀರ್ಣದ ಮೀನು ಕೃಷಿ ಕೊಳ ನಿರ್ಮಿಸಲು ಅವರಿಗೆ ಘಟಕ ವೆಚ್ಚ ರೂ.0.40 ಲಕ್ಷಗಳಲ್ಲಿ ಗರಿಷ್ಟ ರೂ.0.10 ಲಕ್ಷಕ್ಕೆ ಮೀರದಂತೆ ಶೇ.25 ರಷ್ಟು

ಸಹಾಯಧನ ನೀಡಲಾಗುವುದು. ಅರ್ಧ ಎಕರೆ ಪ್ರದೇಶದ ಮೀನು ಕೊಳಕ್ಕೆ ಘಟಕ ವೆಚ್ಚ ರೂ.0.20 ಲಕ್ಷಗಳಲ್ಲಿ ಗರಿಷ್ಟ ರೂ.0.50 ಲಕ್ಷ ಮೀರದಂತೆ ಶೇ.25 ರಷ್ಟು ಸಹಾಯಧನ ನೀಡಲಾಗುವುದು.

**5) ಮೀನುಗಾರಿಕೆ ಕಟ್ಟಡಗಳು, ಸೌಲಭ್ಯಗಳ ನಿರ್ಮಾಣ ಮತ್ತು ನಿರ್ವಹಣೆ:-**

ಈ ಯೋಜನೆಯಡಿ ಇಲಾಖೆಗೆ ಬೇಕಾದ ಕಛೇರಿ ಕಟ್ಟಡಗಳು, ಪ್ಯಾಕಿಂಗ್ ಷೆಡ್, ಮೀನುಮರಿ ಪಾಲನಾ ಕೊಳಗಳ ನಿರ್ಮಾಣ, ದುರಸ್ತಿ, ಪಂಪ್ ಹೌಸ್ ನಿರ್ಮಾಣ ಮತ್ತು ದುರಸ್ತಿ ಕಾಂಪೌಂಡ್ ಮತ್ತು ತಂತಿ ಬೇಲಿ ನಿರ್ಮಾಣ ಮತ್ತು ದುರಸ್ತಿ ಅಕ್ವೇರಿಯಂ ನಿರ್ಮಾಣ ಮತ್ತು ದುರಸ್ತಿ ಹಾಗೂ ಸದರಿ ಕಟ್ಟಡಗಳು, ಕೊಳಗಳು, ಪ್ಯಾಕಿಂಗ್ ಷೆಡ್, ಕಾಂಪೌಂಡ್, ತಂತಿ ಬೇಲಿಗಳು ಅಕ್ವೇರಿಯಂ ಇತ್ಯಾದಿಯ ನಿರ್ವಹಣೆ ಮಾಡಲಾಗುವುದು. ಮೇಲ್ಕಂಡ ಕಾಮಗಾರಿಗಳನ್ನು ಸ್ಥಳೀಯ ಜಿಲ್ಲಾ ಪಂಚಾಯಿತಿ ಇಂಜಿನಿಯರಿಂಗ್ ವಿಭಾಗ, ಭೂಸೇನಾ ನಿಗಮ ಮತ್ತು ಇಲಾಖೆಯಿಂದ ತೆಗೆದುಕೊಳ್ಳಲಾಗುವುದು.

**6) ಮೀನು ಮಾರುಕಟ್ಟೆ ಮತ್ತು ಮತ್ಸ್ಯವಾಹಿನಿಗೆ ಸಹಾಯ:-**

ಈ ಯೋಜನೆಯಡಿ ವೃತ್ತಿ ನಿರತ ಮೀನುಗಾರರು ಅವರು ಹಿಡಿದ ಮೀನುಗಳನ್ನು ತಾಜವಾಗಿ ಕೊಂಡ್ಯೊಯ್ದು ಮಾರಾಟ ಮಾಡಲು ಹಾಗೂ ಒಂದೆಡೆಯಿಂದ ಇನ್ನೊಂದೆಡೆಗೆ ಸುಲಭವಾಗಿ ಮತ್ತು ಬೇಗನೆ ಸಾಗಿಸಲು ಪ್ಲಾಸ್ಟಿಕ್ ಪೆಟ್ಟಿಗೆ ಮತ್ತು ಬೈಸಿಕಲ್‌ಗಳನ್ನು ಶೇ.50ರ ಸಹಾಯಧನದಲ್ಲಿ ನೀಡಲಾಗುವುದು. ಮತ್ಸ್ಯಾವಾಹಿನಿ ವಾಹನ ಖರೀದಿಸಲು ಘಟಕ ವೆಚ್ಚ ರೂ.1.00 ಲಕ್ಷದಲ್ಲಿ ಶೇ.25 ರಷ್ಟು ಅಂದರೆ ಗರಿಷ್ಟ ರೂ.0.25 ಲಕ್ಷಕ್ಕೆ ಮೀರದಂತೆ ಸಹಾಯಧನ ನೀಡಲಾಗುವುದು.

**7) ವಸ್ತು ಪ್ರದರ್ಶನ ಮತ್ತು ತರಬೇತಿ:-**

ಮೀನುಗಾರಿಕೆಯಲ್ಲಿ ವಿಶೇಷ ಸಂಶೋಧನೆಗಳು, ಮೀನು ಕೃಷಿಗೆ ಇಲಾಖೆಯಿಂದ ದೊರೆಯುವ ಸೌಲಭ್ಯಗಳು, ಅಲಂಕಾರಿಕಾ ಮೀನುಗಳ ಪ್ರದರ್ಶನ ಮತ್ತು ಇತರೆ ಅಭಿವೃದ್ಧಿ ಪರ ಕಾರ್ಯಕ್ರಮಗಳ ಪ್ರದರ್ಶನವನ್ನು ಜನ ಸಮೂಹದ ಸಭೆ, ಸಮಾರಂಭ, ಜಾತ್ರೆ, ಕೃಷಿ ಮೇಳ ಇತ್ಯಾದಿ ಕಡೆ ಪ್ರದರ್ಶಿಸಲಾಗುವುದು, ಮತ್ತು ಮೀನುಗಾರರಿಗೆ ಮೀನುಗಾರಿಕೆಯಲ್ಲಿನ ಇತ್ತೀಚಿನ ತಾಂತ್ರಿಕತೆ ಬಗ್ಗೆ ಅರಿವು ಮೂಡಿಸಲಾಗುವುದು.

**8) ಜಿಲ್ಲಾ ಕೇಂದ್ರದಲ್ಲಿ ಮತ್ಸ್ಯಾಗಾರ ನಿರ್ವಹಣೆ:-**

ಹಾಸನ ನಗರದ ಮಹಾರಾಜ ಪಾರ್ಕಿನಲ್ಲಿ ನಿರ್ಮಿಸಲಾಗಿರುವ ಮತ್ಸ್ಯಾಗಾರದಲ್ಲಿ ವಿವಿಧ ಜಾತಿಯ ಅಲಂಕಾರಿಕ ಮೀನುಗಳನ್ನು ವಿವಿಧ ಜಾತಿಯ ಸಸ್ಯ ಆಟಿಕೆ ಗೊಂಬೆಗಳು ಇತ್ಯಾದಿಯನ್ನು ಅಳವಡಿಸಿ ವಿದ್ಯುತ್ ದೀಪಗಳ ಅಲಂಕಾರದೊಂದಿಗೆ ಜಿಲ್ಲೆಯ ಹಾಗೂ ಇತರೆ ನಾಗರೀಕರಿಗೆ ಮಕ್ಕಳಿಗೆ ಪ್ರದರ್ಶಿಸಿ ಉತ್ತಮ ಮನರಂಜನೆಯನ್ನು ನೀಡಲಾಗುತ್ತಿದೆ.

**II ಅಧಿಕಾರಿಗಳು ಮತ್ತು ನೌಕರರ ಅಧಿಕಾರಿಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:-**

ಮೇಲೆ ತಿಳಿಸಿರುವಂತೆ ಶೀರ್ಷಿಕೆ (1) ರಲ್ಲಿ ಕಾಣಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಜಿಲ್ಲಾ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರವರ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಜಿಲ್ಲಾ ಮಟ್ಟದಲ್ಲಿ ಎಲ್ಲಾ ಭಾಗಗಳ ಎಲ್ಲಾ ವಿಷಯಗಳ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಹಾಸನ ಇವರಿಗೆ ಇರುತ್ತದೆ.

**ಅ) ಅಧಿಕಾರಿಯವರ ಕರ್ತವ್ಯಗಳು:-**

1) ಜಿಲ್ಲೆಯಲ್ಲಿನ 40 ಹೆಕ್ಟೇರ್ ಮೇಲ್ಪಟ್ಟು ಅಚ್ಚುಕಟ್ಟುವುಳ್ಳ ಎಲ್ಲಾ ಕೆರೆಗಳ ಮೀನುಪಾಶುವಾರು ಹಕ್ಕನ್ನು ಟೆಂಡರ್ ಕಂ ಹರಾಜನ್ನು ಮೂಲಕ/ಗುತ್ತಿಗೆ ಮೂಲಕ ವಿಲೇವಾರಿ ಮಾಡಿಸುವ ಬಗ್ಗೆ ನಿಯಮಾನುಸಾರ ಕ್ರಮ ಕೈಗೊಳ್ಳುವುದು.
2) ಚಾಲ್ತಿಯಲ್ಲಿರುವ ಜಿಲ್ಲಾ ವಲಯ ಮತ್ತು ರಾಜ್ಯ ವಲಯ ಯೋಜನೆಗಳ ಅನುಷ್ಠಾನದ ಮೇಲ್ವಿಚಾರಣೆ ಮತ್ತು ನಿಯಂತ್ರಣ
3) ಅಧಿನಿಯಮ ಹಾಗೂ ಬೇರೆ ಯಾವುದೇ ಕಾನೂನಿನ ಮೇರೆಗೆ ಪ್ರದತ್ತವಾಗಿರುವ ಅಧಿಕಾರಗಳನ್ನು ಚಲಾಯಿಸುವುದು.
4) ಜಿಲ್ಲಾ ವಲಯ ಯೋಜನೆಗಳ ಅನುಷ್ಠಾನಕ್ಕೆ ಜಿಲ್ಲಾ ಪಂಚಾಯಿತಿ ಸ್ಥಾಯಿ ಸಮಿತಿ ಅನುಮೋದನೆ ಪಡೆದುಕೊಂಡು ತಾಲ್ಲೂಕು ಮಟ್ಟದ ಅಧಿಕಾರಿಗಳ ಮೂಲಕ ಅವುಗಳನ್ನು ಅನುಷ್ಠಾನಗೊಳಿಸುವುದು.
5) ರಾಜ್ಯವಲಯ ಯೋಜನೆಗಳ ಅನುಷ್ಟಾನಕ್ಕೆ ಮೀನುಗಾರಿಕೆ ಇಲಾಖೆಯ ಮೇಲಾಧಿಕಾರಿಗಳ ಮಂಜೂರಾತಿ ಪಡೆದು ತಾಲ್ಲೂಕು ಮಟ್ಟದ ಅಧಿಕಾರಿಗಳ ಮೂಲಕ ಅವುಗಳನ್ನು ಅನುಷ್ಟಾನಗೊಳಿಸುವುದು.
6) ಜಿಲ್ಲಾ ಕೇಂದ್ರದಲ್ಲಿನ ಕಛೇರಿ ಸಿಬ್ಬಂದಿ ಮತ್ತು ತಾಲ್ಲೂಕು ಕೇಂದ್ರಗಳಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಯನ್ನು ನಿಯಂತ್ರಿಸುವುದು.
7) ವಿವಿಧ ಯೋಜನೆಗಳ ಪ್ರಗತಿ ವರದಿಯನ್ನು ಪ್ರತಿಮಾಹೆ ಮೇಲಾಧಿಕಾರಿಗಳಿಗೆ ಕಳುಹಿಸಿಕೊಡುವುದು.
8) ಪ್ರತಿ ತಿಂಗಳ ಖರ್ಚು ವೆಚ್ಚಗಳ ತಖ್ತೆಯನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
9) ತಾಲ್ಲೂಕು ಮಟ್ಟದ ಅಧಿಕಾರಿಗಳ ಮಾಸಿಕ ಸಭೆಯನ್ನು ಪ್ರತಿ ಮಾಹೆಯ ಮೊದಲ ವಾರದಲ್ಲಿ ನಡೆಸಿ ಪ್ರಗತಿ ಪರಿಶೀಲನೆ ಮಾಡುವುದು.
10) ಅಧೀನ ಕಛೇರಿಗಳ ಹಣಕಾಸಿನ ಬಿಲ್ಲುಗಳಿಗೆ ಮೇಲು ಸಹಿ ಮಾಡುವುದು ಮತ್ತು ಅಧೀನ ಕಛೇರಿ ಅಧಿಕಾರಿಗಳ ಪ್ರವಾಸಗಳನ್ನು ಅನುಮೋದಿಸುವುದು.
11) ಅಧೀನ ಕಛೇರಿಗಳ ವಾರ್ಷಿಕ ಲೆಕ್ಕ ಪತ್ರ ತಪಾಸಣೆ ನಡೆಸುವುದು, ಅನಿರೀಕ್ಷಿತ ಭೇಟಿ ಕೊಟ್ಟು ಪ್ರಗತಿ ಪರಿಶೀಲನೆ ಇತರೆ ಕುಂದುಕೊರತೆಗಳ ಪರಿಶೀಲನೆ ನಡೆಸುವುದು.
12) ಮೀನು ಕೃಷಿ ಕ್ಷೇತ್ರಗಳ ಸ್ಥಳ ಪರಿಶೀಲನೆ, ಮೀನುಗಾರರ ಮನೆಗಳ ಕಾಮಗಾರಿಗಳ ಸ್ಥಳ ಪರಿಶೀಲನೆ ನಡೆಸುವುದು.
13) ನದಿ ಮತ್ತು ಜಲಾಶಯಗಳಿಗೆ ಉತ್ತಮ ತಳಿಯ ಮೀನುಮರಿಗಳನ್ನು ಬಿತ್ತನೆ ಮಾಡಿಸಿ ಮೀನು ಉತ್ಪಾದನೆ ಮಾಡಿ, ಮೀನುಗಾರರಿಗೆ ಲೈಸೆನ್ಸ್ ಮೂಲಕ ಹಿಡಿದು ಮಾರಾಟ ಮಾಡಲು ಅವಕಾಶ ಕಲ್ಪಿಸುವುದು ಮತ್ತು ಮೀನುಗಾರರ ಲೈಸೆನ್ಸ್ ಹಣವನ್ನು ಸರ್ಕಾರಕ್ಕೆ ಜಮಾ ಮಾಡಿಸುವುದು.
14) ಕಾಲಕಾಲಕ್ಕೆ ವಸ್ತು ಪ್ರದರ್ಶನ, ತರಬೇತಿ, ಕೃಷಿ ಮೇಳ ಇತ್ಯಾದಿಯನ್ನು ನಡೆಸಿ ಮೀನುಗಾರರಿಗೆ, ಮೀನು ಕೃಷಿಕರಿಗೆ ಮೀನುಗಾರಿಕೆ ತಾಂತ್ರಿಕತೆ ಬಗ್ಗೆ ಅರಿವು ಮೂಡಿಸುವುದು.
15) ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ನೀಡಲಾದ ಸವಲತ್ತುಗಳ ಪರಿಶೀಲನೆ.

**ಆ) ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಸಣೆ ವಿವರಗಳು:-**

ಕಛೇರಿ ಸಿಬ್ಬಂದಿ ವರ್ಗದವರು ಜಿಲ್ಲಾ ಮಟ್ಟದಲ್ಲಿ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರ ಅಡಿಯಲ್ಲಿ ಕಾರ್ಯನಿರ್ವಹಿಸುವರು. ಸರ್ಕಾರದಿಂದ, ಮೇಲಾಧಿಕಾರಿಗಳಿಂದ, ಇತರೆ ಅರೆ ಸರ್ಕಾರಿ/ಸ್ವಾಯತ್ತ ಸಂಸ್ಥೆಗಳಿಂದ, ಸಾರ್ವಜನಿಕರಿಂದ, ಫಲಾನುಭವಿಗಳಿಂದ, ಅಧೀನ ಕಛೇರಿಗಳಿಂದ ಬರುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಹಾಸನ ರವರ ಕಿರು ಸಹಿ ಮಾಡಿದ ನಂತರ ಸ್ವೀಕೃತಿ ವಹಿಯಲ್ಲಿ ನೊಂದಾಯಿಸಿ ಸಂಬಂಧಿಸಿದ ಸಂಕಲನಗಳ ಸಹಾಯಕರುಗಳಿಗೆ ನೀಡಿ ಸ್ವೀಕೃತಿ ರುಜು ಪಡೆಯಲಾಗುವುದು. ಕಛೇರಿಯಲ್ಲಿನ ಸಹಾಯಕರುಗಳು ಅವರ ಸಂಕಲನಗಳಿಗೆ ಸ್ವೀಕೃತವಾಗುವ ಪತ್ರಗಳನ್ನು ಅವರವರ ದಿನವಹಿಯಲ್ಲಿ ನಮೂದಿಸಿಕೊಂಡು ಕಛೇರಿ ಕೈಪಿಡಿ ಪ್ರಕಾರ ಕಡತದಲ್ಲಿ ಟಿಪ್ಪಣಿ ಹಾಕಿ ಕಛೇರಿ ಮುಖಾಂತರ ಕಛೇರಿ ಮುಖ್ಯಸ್ಥರಿಗೆ ಮಂಡಿಸುವರು, ಕಛೇರಿ ಸಹಾಯಕರುಗಳಿಂದ ಬಂದಂತಹ ಕಡತಗಳನ್ನು ಕಛೇರಿ ಅಧೀಕ್ಷಕರು ಪರಿಶೀಲಿಸಿ ಅವರ ಅಭಿಪ್ರಾಯದೊಂದಿಗೆ ಕಛೇರಿ ಮುಖ್ಯಸ್ಥರಾದ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು ರವರಿಗೆ ಮಂಡಿಸಲಾಗುವುದು. ನಂತರ ಕಛೇರಿ ಮುಖ್ಯಸ್ಥರು ಅವರ ಪ್ರಾಧಿಕಾರದೊಳಗಿನ ವಿಷಯಗಳ ಮೇಲೆ ತೀರ್ಮಾನ ತೆಗೆದುಕೊಳ್ಳುವರು ಮತ್ತು ಅವರ ಪ್ರಾಧಿಕಾರಕ್ಕೂ ಮೀರಿದ ವಿಷಯಗಳ ಮೇಲೆ ಅಂತಿಮ ತೀರ್ಮಾನ ಅಥವಾ ಮಂಜುರಾತಿ ಪ್ರಕರಣಗಳಲ್ಲಿ ಮೇಲಾಧಿಕಾರಿಗಳ ಅಂತಿಮ ತೀರ್ಮಾನಕ್ಕಾಗಿ ನಿಯಮಾನುಸಾರ ಟಿಪ್ಪಣಿಯನ್ನು ನಮೂದಿಸಿ ಅದರಂತೆ ಮೇಲಾಧಿಕಾರಿಗಳಿಗೆ ಪತ್ರಗಳನ್ನು ಕಳುಹಿಸಿಕೊಟ್ಟು ಅವರಿಂದ ಬರುವ ಅಂತಿಮ ತೀರ್ಮಾನ ಅಥವಾ ಮಂಜೂರಾತಿಯ ಮೇರೆಗೆ ಮುಂದಿನ ಅನುಷ್ಠಾನ ಕ್ರಮ ಕೈಗೊಳ್ಳಲಾಗುತ್ತದೆ.

**III ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:-**

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ವಹಿಯಲ್ಲಿ ದಾಖಲೆ ಮಾಡಿ ಕಛೇರಿ ಕೈಪಿಡಿ ಪ್ರಕಾರ ಮುಂದಿನ ಕ್ರಮಕ್ಕೆ ಸಂಬಂಧಿಸಿದ ಸಂಕಲನಗಳ ಸಹಾಯಕರುಗಳಿಗೆ ನೀಡುವುದು.
2) ಸಾರ್ವಜನಿಕರಿಂದ ಸ್ವೀಕರಿಸಲಾಗುವ ಕಾಗದ ಪತ್ರಗಳಿಗೆ ಸ್ವೀಕೃತಿ ನೀಡುವುದಲ್ಲದೆ ಕಾರ್ಯಗತ ಅವಧಿ ನಿಗದಿಪಡಿಸಿ ತಿಳಿಸವುದು.
3) ಅರೆ ಸರ್ಕಾರಿ ಪತ್ರಗಳು, ಸಚಿವರು, ಶಾಸಕರುಗಳಿಂದ ಬರುವ ಪತ್ರಗಳನ್ನು ಪ್ರತ್ಯೇಕ ವಹಿಯಲ್ಲಿ ನಮೂದಿಸಿ ಜರೂರು ಕ್ರಮ ಜರುಗಿಸಲಾಗುವುದು.
4) ಅಧೀನ ಕಛೇರಿಗಳ ವಾರ್ಷಿಕ ಲೆಕ್ಕ ತಪಾಸಣೆಯನ್ನು ಮಾಡುವುದು.
5) ಅಧೀನ ಕಛೇರಿಗಳಿಂದ ವರದಿಯನ್ನು ಪಡೆಯಲು ಕಾಲಾವಧಿ ನಿಗದಿಪಡಿಸುವುದು.
6) ಪ್ರತಿ ತಿಂಗಳು ಮೊದಲವಾರದಲ್ಲಿ ಇಲಾಖೆಯ ಕಾರ್ಯಕ್ರಮಗಳ ಪ್ರಗತಿ ಪರಿಶೀಲಿಸಲು ಅಧೀನ ಅಧಿಕಾರಿಗಳ ಸಭೆಯನ್ನು ಏರ್ಪಡಿಸಿ ಪ್ರಗತಿ ಪರಿಶೀಲನೆ ನಡೆಸುವುದು.
7) ಇಲಾಖೆಯ ಅಧಿಕಾರಿ/ಸಿಬ್ಬಂದಿ ವರ್ಗದವರಿಗೆ ತರಬೇತಿ ಕೊಡಿಸುವುದು.
8) ಸಾರ್ವಜನಿಕ ಕುಂದು ಕೊರತೆಗಳ ನಿವಾರಣೆಗೆ ಸೂಕ್ತ ಕ್ರಮ ಕೈಗೊಳ್ಳುವುದು.
9) ಅಧೀನ ಅಧಿಕಾರಿಗಳ ಕಛೇರಿಗಳಿಗೆ ಅನಿರೀಕ್ಷಿತ ಭೇಟಿ ಕೊಟ್ಟು ಪ್ರಗತಿ ಪರಿಶೀಲಿಸಿ ಮತ್ತು ಇತರೆ ಕುಂದುಕೊರತೆಗಳ ಪರಿಶೀಲನೆ ನಡೆಸುವುದು.
10) ವಿವಿಧ ಯೋಜನೆಗಳ ಪ್ರಗತಿ ವರದಿಯನ್ನು, ವೆಚ್ಚ ಮತ್ತು ಆದಾಯದ ಪ್ರಗತಿ ವರದಿಯನ್ನು ನಿಗದಿತ ಅವಧಿಯೊಳಗೆ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.

**IV ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:-**

1) ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರ ಅಧಿಕಾರಿಯನ್ನು ನೇಮಕ ಮಾಡುವುದು.
2) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಪ್ರಕಟಿಸಿ ಸಾರ್ವಜನಿಕರಿಗೆ ನೀಡುವುದು.
3) ಇಲಾಖೆಗೆ ಸಂಬಂಧಿಸಿದಂತಹ ಎಲ್ಲಾ ಮಾಹಿತಿಯನ್ನು ನೇರವಾಗಿ, ಅಥವಾ ದೂರವಾಣಿ ಮೂಲಕ ಕಛೇರಿ ಮುಖ್ಯಸ್ಥರಿಂದಾಗಲಿ, ಕಛೇರಿ ಅಧೀಕ್ಷಕರಿಂದಾಗಲಿ ಅಥವಾ ಸಹಾಯಕರಿಂದಾಗಲಿ ಪಡೆಯಬಹುದು.
4) ತಾಲ್ಲೂಕು ಮಟ್ಟದ ಕಛೇರಿಗಳಲ್ಲಿಯೂ ಸಹ ಇಲಾಖೆಯ ಎಲ್ಲಾ ಮಾಹಿತಿಯನ್ನು ನೇರವಾಗಿ ಅಥವಾ ದೂರವಾಣಿ ಮೂಲಕ ಆಯಾ ತಾಲ್ಲೂಕಿನ ಮೀನುಗಾರಿಕೆ ಸಹಾಯಕ ನಿರ್ದೇಶಕರು ಶ್ರೇಣಿ (2) ರವರಿಂದ ಪಡೆಯಬಹುದು. ಜಿಲ್ಲಾ ಮಟ್ಟದ ಮತ್ತು ತಾಲ್ಲೂಕು ಮಟ್ಟದ ಕಛೇರಿಗಳ ದೂರವಾಣಿ ಸಂಖ್ಯೆ ಈ ಕೆಳಕಂಡಂತಿದೆ.

| ಕ್ರ. ಸಂ. | ಕಛೇರಿ ಹೆಸರು/ವಿಳಾಸ | ದೂರವಾಣಿ ಸಂಖ್ಯೆ | |
|---|---|---|---|
| | | ಕಛೇರಿ | ನಿವಾಸ |
| 1. | ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ರವೀಂದ್ರನಗರ, ಹಾಸನ-573 201 | 268571 | 245318 |
| 2. | ಮೀನುಗಾರಿಕೆ ಸಹಾಯಕ ನಿರ್ದೇಶಕರು, (ಶ್ರೇ-2), ಬಿ.ಎಂ.ರಸ್ತೆ, ಜೈಲ್ ಹಿಂಭಾಗ, ಹಾಸನ-573 201 | 253803 | - |
| 3. | ಮೀನುಗಾರಿಕೆ ಸಹಾಯಕ ನಿರ್ದೇಶಕರು, (ಶ್ರೇ-2), ಬಿ.ಹೆಚ್. ರಸ್ತೆ, ಅರಸೀಕೆರೆ | 230038 | - |
| 4. | ಮೀನುಗಾರಿಕೆ ಸಹಾಯಕ ನಿರ್ದೇಶಕರು, (ಶ್ರೇ-2), ಅರಕಲಗೂಡು ತಾಲ್ಲೂಕು ಪಂಚಾಯಿತಿ ಆವರಣ, ಅರಕಲಗೂಡು | 221636 | - |
| 5. | ಮೀನುಗಾರಿಕೆ ಸಹಾಯಕ ನಿರ್ದೇಶಕರು, (ಶ್ರೇ-2), ಬೇಲೂರು | 223100 | - |
| 6. | ಮೀನುಗಾರಿಕೆ ಸಹಾಯಕ ನಿರ್ದೇಶಕರು, (ಶ್ರೇ-2), ಚನ್ನರಾಯಪಟ್ಟಣ | 254625 | - |
| 7. | ಮೀನುಗಾರಿಕೆ ಸಹಾಯಕ ನಿರ್ದೇಶಕರು, (ಶ್ರೇ-2), ಮೈಸೂರು ರಸ್ತೆ, ಹೊಳೆನರಸೀಪುರ | 272138 | - |

**V 2005ರ ಮಾಹಿತಿ ಹಕ್ಕು ಕಾಯ್ದೆ:-**

2005ರ ಮಾಹಿತಿ ಹಕ್ಕು ಕಾಯ್ದೆಯ (2005ರ ಕೇಂದ್ರ ಕಾಯ್ದೆ 22) ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಸನ ಜಿಲ್ಲಾ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರವರ ಕಛೇರಿಗೆ ಸಂಬಂಧಿಸಿದಂತೆ ಜಿಲ್ಲಾ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಹಾಸನ ಇವರನ್ನು **"ಸಾರ್ವಜನಿಕ ಮಾಹಿತಿ ಅಧಿಕಾರಿ"** ಎಂದು ನೇಮಕ ಮಾಡಲಾಗಿದೆ.

2005ರ ಮಾಹಿತಿ ಹಕ್ಕು ಕಾಯ್ದೆಯ ಸೆಕ್ಷನ್ 5(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಸನ ಜಿಲ್ಲಾ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರವರ ಕಛೇರಿಗೆ ಸಂಬಂಧಿಸಿದಂತೆ ಕಛೇರಿ ಅಧೀಕ್ಷಕರು, ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು ರವರ ಕಛೇರಿ, ಹಾಸನ ಇವರನ್ನು **"ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ"** ಎಂದು ನೇಮಕ ಮಾಡಲಾಗಿದೆ.

2005ರ ಮಾಹಿತಿ ಹಕ್ಕು ಕಾಯಿದೆ ಸೆಕ್ಷನ್ 19(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಹಾಸನ ಇವರನ್ನು **"ಮೇಲ್ಮನವಿ ಪ್ರಾಧಿಕಾರ"** ಎಂದು ನೇಮಕ ಮಾಡಲಾಗಿದೆ.

ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು
ಜಿಲ್ಲಾ ಪಂಚಾಯತ್, ಹಾಸನ.

ಪಿ.ಆರ್. 787

## ಪೊಲೀಸ್ ಇಲಾಖೆ

## ಪೊಲೀಸ್ ಕಮೀಷನರ್‌ರವರ ಆಯುಕ್ತರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

### ಅಧಿಸೂಚನೆ

### ಸಂಖ್ಯೆ:02/ಡಿಸಿಪಿ/ಸಂ.ಪೂ/2006, ದಿನಾಂಕ: 22ನೇ ಏಪ್ರಿಲ್ 2007

ಮೆಟ್ರೋ ರೈಲು ಕಾಮಗಾರಿ ಕೆಲಸವನ್ನು ಬೆಂಗಳೂರು ಮೆಟ್ರೋ ರೈಲು ನಿಗಮ ನಿಯಮಿತ ರವರು ಕೈಗೆತ್ತಿಕೊಂಡು ಬೆಂಗಳೂರು ನಗರ ಸಂಚಾರ ಪೂರ್ವ ವ್ಯಾಪ್ತಿಗೆ ಸೇರಿರುವ ಮಹಾತ್ಮಗಾಂಧಿ ರಸ್ತೆಯಲ್ಲಿ (ಎಂ.ಜಿ. ರಸ್ತೆ) ಅನಿಲ್ ಕುಂಬ್ಳೆ ವೃತ್ತದಿಂದ ಟ್ರಿನಿಟಿ ವೃತ್ತದವರೆಗೆ ಒಟ್ಟು 6 ಭಾಗಗಳಾಗಿ ವಿಂಗಡಿಸಿ ಕಾಮಗಾರಿಯನ್ನು ತುರ್ತಾಗಿ ಕೈಗೊಳ್ಳುತ್ತಿದ್ದು, ಪ್ರಾರಂಭಕ್ಕೆ ಅನಿಲ್ ಕುಂಬ್ಳೆ ವೃತ್ತದಿಂದ ಡೆಕನ್ ಹೆರಾಲ್ಡ್ ವರೆಗೆ ಹಾಗೂ ಕಾಮರಾಜ ರಸ್ತೆ ಜಂಕ್ಷನ್‌ನಿಂದ ಮೆಯೋ ಹಾಲ್ ವರೆಗಿನ ಎರಡು ಭಾಗಗಳಲ್ಲಿ ಕಾಮಗಾರಿ ಕೆಲಸವನ್ನು ಕೈಗೊಳ್ಳಲಿದ್ದಾರೆ. ಈ ಭಾಗದ ರಸ್ತೆಗಳಲ್ಲಿ ಸಾರ್ವಜನಿಕರ ಹಿತದೃಷ್ಟಿಯಿಂದ ಹಾಗೂ ಸುಗಮ ಸಂಚಾರದ ಉದ್ದೇಶದಿಂದ ಹಾಗೂ ಕಾಮಗಾರಿ ಕೆಲಸಕ್ಕೆ ಅಡಚಣೆಯಾಗದಂತೆ ಹಾಗೂ ಕಾಮಗಾರಿಯು ಯಶಸ್ವಿಯಾಗಿ ಪೂರ್ಣಗೊಳ್ಳಲು ಅನುವಾಗುವಂತೆ ಸೂಕ್ತ ಸಂಚಾರ ವ್ಯವಸ್ಥೆ ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಎಂ.ಜಿ. ರಸ್ತೆಯಲ್ಲಿ ಮೆಟ್ರೋ ರೈಲು ಕಾಮಗಾರಿ ಪ್ರಯುಕ್ತ ಸುಗಮ ಸಂಚಾರದ ದೃಷ್ಟಿಯಿಂದ ಕೆಳಕಂಡಂತೆ ಸಂಚಾರ ಮಾರ್ಪಾಡುಗಳನ್ನು ಮಾಡಿ ಆದೇಶಿಸಿರುತ್ತೇನೆ.

1. ಎಂ.ಜಿ. ರಸ್ತೆಯ ಕಾವೇರಿ ಕರಕುಶಲ ವೃತ್ತದ ಮಾರ್ಗವಾಗಿ ಸಂಚರಿಸುತ್ತಿದ್ದ ಬಿ.ಎಂ.ಟಿ.ಸಿ. ಬಸ್ಸುಗಳ ಸಂಚಾರವನ್ನು ನಿಷೇಧಿಸಿದೆ. ಶಿವಾಜಿನಗರ ಬಸ್ ನಿಲ್ದಾಣದಿಂದ ನೀಲಸಂದ್ರ ಇತ್ಯಾದಿ ಕಡೆಗಳಿಗೆ ಹೋಗುವ ಬಸ್ಸುಗಳು ಪಾರ್ಸಿ ಟೆಂಪಲ್ - ಸಿ.ಟಿ.ಓ - ಕ್ವೀನ್ಸ್ ವೃತ್ತ - ಲೆವೆಲ್ಲಿ ರಸ್ತೆ - ಕ್ಯಾಷ್ ಫಾರ್ಮಸಿ ವೃತ್ತಕ್ಕೆ ಬಂದು ಎಡತಿರುವು ಪಡೆದುಕೊಂಡು ರೆಸಿಡೆನ್ಸಿ ಮಾರ್ಗವಾಗಿ ಸಂಚರಿಸಲು ವ್ಯವಸ್ಥೆ ಕಲ್ಪಿಸಿದೆ. ವಾಪಸ್ಸು ಪ್ರಯಾಣಕ್ಕೆ ಈ ಬಸ್ಸುಗಳು ಆಶೀರ್ವಾದಂ ವೃತ್ತ- ಮ್ಯೂಸಿಯಂ ರಸ್ತೆ, ಎಸ್.ಬಿ.ಐ. ಜಂಕ್ಷನ್, ಅನಿಲ್ ಕುಂಬ್ಳೆ ವೃತ್ತ ಮಾರ್ಗವಾಗಿ ಶಿವಾಜಿನಗರ ಬಸ್ ನಿಲ್ದಾಣ ತಲುಪಲು ವ್ಯವಸ್ಥೆ ಕಲ್ಪಿಸಿದೆ.
2. ಅನಿಲ್ ಕುಂಬ್ಳೆ ವೃತ್ತದಿಂದ ಕಾವೇರಿ ಕರಕುಶಲ ವೃತ್ತದವರೆಗೆ ರಸ್ತೆಯ ಪಶ್ಚಿಮದಿಂದ ಪೂರ್ವಕ್ಕೆ ಆಟೋರಿಕ್ಷಾಗಳ ಸಂಚಾರವನ್ನು ನಿಷೇಧಿಸಿದೆ. ಕಬ್ಬನ್ ರಸ್ತೆಯಲ್ಲಿ ಈ ಆಟೋಗಳ ಸಂಚಾರಕ್ಕೆ ವ್ಯವಸ್ಥೆ ಕಲ್ಪಿಸಿದೆ.
3. ಕಾವೇರಿ ಕರಕುಶಲ ವೃತ್ತದಿಂದ ಮೆಯೋ ಹಾಲ್‌ವರೆಗೆ ರಸ್ತೆಯ ಉತ್ತರ ಭಾಗಕ್ಕಿರುವ ವಾಹನಗಳ ನಿಲುಗಡೆಯನ್ನು ತೆಗೆದು ಯಾವುದೇ ವಾಹನಗಳು ನಿಲುಗಡೆಗೊಳ್ಳದಂತೆ ನಿಷೇಧಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 22.4.2007 ರಿಂದ ಕಾಮಗಾರಿ ಪೂರ್ಣಗೊಳ್ಳುವವರೆಗೆ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 22.4.2007 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 796

## ಪೊಲೀಸ್ ಇಲಾಖೆ

## ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

### ಅಧಿಸೂಚನೆ ಸಂಖ್ಯೆ:3/ಸಂವಿ/ಸಿ.ಓ.ಪಿ/2007, ದಿನಾಂಕ: 21ನೇ ಏಪ್ರಿಲ್ 2007

ಬೆಂಗಳೂರು ಮಹಾನಗರ, ವಿಲ್ಸನ್‌ಗಾರ್ಡನ್ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿರುವ ಡಾ: ಮರಿಗೌಡ ರಸ್ತೆಯು 50 ಅಡಿಗಳುಳ್ಳ ರಸ್ತೆಯಾಗಿದ್ದು ಈ ರಸ್ತೆಯು ಪೂರ್ವ ಪಶ್ಚಿಮಾಭಿಮುಖವಾಗಿ ಹರಿದು ರಸ್ತೆಯ ಮಧ್ಯೆದಲ್ಲಿ ರಸ್ತೆ ವಿಭಜಕ ಇರುತ್ತದೆ. ಡೈರಿ ವೃತ್ತದ ಕಡೆಯಿಂದ ಮತ್ತು ವಿಲ್ಸನ್‌ಗಾರ್ಡನ್ ಹಾಗೂ ಲಾಲ್‌ಬಾಗ್ ಕಡೆಯಿಂದ ಬರುವ ಹೆಚ್ಚು ವಾಹನಗಳಿಂದ ಇತ್ತೀಚಿನ ದಿನಗಳಲ್ಲಿ ಈ ರಸ್ತೆಯಲ್ಲಿ ಸಂಚಾರ ಒತ್ತಡವು ಅತ್ಯಧಿಕವಾಗಿರುತ್ತದೆ.

ಡಾ: ಮರಿಗೌಡ ರಸ್ತೆಯ ನಿಮಾನ್ಸ್ ಜಂಕ್ಷನ್‌ನಲ್ಲಿ ಲಕ್ಕಸಂದ್ರ ಕಡೆಯಿಂದ ಬರುವಂತಹ ವಾಹನಗಳಿಗೆ ನಿಮಾನ್ಸ್ ಕಡೆಗೆ ಹೋಗಲು ಬಲ ತಿರುವು ಇದ್ದು, ಬಲತಿರುವು ತೆಗೆದುಕೊಳ್ಳಲು ವಾಹನಗಳು ನಿಲ್ಲುವುದರಿಂದ ಇತರೆ ವಾಹನಗಳ ಸುಗಮ ಸಂಚಾರಕ್ಕೆ ಅಡಚಣೆಯಾಗುತ್ತಿರುವುದಲ್ಲದೆ

